Photo by V. R. Ramani



ಬಹುಮಾನ
ಪಡೆದ ಶೀರ್ಷಿಕೆ

ಅಟ್ಟಹಾ—ಹಾಸ!

ಕಳಿಸಿದವರು:
ಬಿ. ರಾಧಾಕೃಷ್ಣರಾವ್

*

# ಚಂದಮಾಮ

ಸಂಚಾಲಕರು: 'ಚಕ್ರಪಾಣಿ'

## ಜಯ ಬೆನಕ!

ಪಾರ್ವತಿಯ ಪ್ರೀತಿಯಾ ಬೊಂಬೆ ಬೆನಕ
ಶಿವನಾನೆ ತಲೆಯಿಟ್ಟು ಹರಸಿದ ಅನೇಕ
ದುರಿತಗಳ ನುಂಗುವಾ ಹಿರಿಯ ಮೈದೇರು!
ಇಲಿಯೇರಿ ಬರುತಾನೆ ನೋಡಿ ನಮ್ಮೂರು!
ಬಾಲವಟು ವಿಘ್ನೇಶ ಬಾಲಕರ ಕಾಪಾತ
ಕಬ್ಬು ತೆಂಗಿನಕಾಯ ನೈವೇದ್ಯಕೊಂಬಾತ
ಲಡ್ಡುಂಡೆ ಮೋದಕಾದಿಗಳುಂಟು ತುಂಬ.
ಒಡ್ಡೋಲಗವ ಕೊಟ್ಟು ಕಾಯೊಹೇರಂಭ!
ಬಾರೋ ನಮ್ಮನೆಗೆ ಪೂಜಿಪೆವು ನಿನ್ನ;
ಮುಂಡಿಕ್ಕಿ ಮಣಿದು ಬೇಡುವೆವು ನಿನ್ನ;
ಮೆರೆವಣಿಸುತೇವೆ ನಿನ್ನ; ಹರಿವಿಘ್ನ ವನ್ನ;
ಜಯ ಬೆನಕ ಚೆನ್ನ! ವರದಸಂಪನ್ನ!
ಸುಪ್ರಸನ್ನಾ! ಬಾರೊ–ಚೌತಿ ಚೆನ್ನಾ!

"ಸುಂದರಿ"

ಸಂಪುಟ ೧೩ : ಸೆಪ್ಟೆಂಬರ್ ೧೯೬೧ : ಸಂಚಿಕೆ ೩





CHITRA

# ಕೊಟ್ಟ ಮಾತು

ದಾರಿ ತಪ್ಪಿದ ಒಂಟೆ
ಕಾರಡವಿಗಳ ತಿರುಗಿ
ಮೃಗರಾಜನಾ ಗವಿಯ ಮುಂದೆ ಬಂತು.
ಸಿಂಗ ಕೇಳಿದುದಕ್ಕೆ
ಸಂಗತಿಯ ಪೇಳಲದು
'ಎನ್ನ ಬಂಟಾಗು ನೀನಿಲ್ಲೆ ನಿಂತು;
ಪರರಿಂದ ನಿನಗೆ ಆ
ಪದ ಬಾರದಂತೆ ನಾ
ನಿರತ ಕಾಯುವೆನೆ'ಂದು ಪೇಳೆ ಸಿಂಗ
ಮಾತಿತ್ತ ಸಿಂಗದಾ





ಮಾತ ಮೀರದೆ ಒಂಟೆ
ಲೇಸೆಂದಿತಿದುವೆ ಮೇಲಾದ ರಾಜಾಂಗ.

*　　*　　*

ಇಂತಿರಲೊಂದಾನೊಂದುದಿನ
ಸಿಂಗಕೆ ಬಂದಿತು ಹೈರಾಣ
ಹಸಿವೆಯ ತಾಳದೆ ಮಲಗಿತ್ತು.
ವನಮೃಗಗಳಿಗಿದು ಗೊತ್ತಾಯ್ತು.
ಸಿಂಹದ ಗವಿಬಳಿಗೋಡಿಬಂದುವು,
ಒಂಟೆ ದೂರದಲ್ಲಿರುವುದ ಕಂಡುವು.
ನುಡಿದುವು 'ಸ್ವಾಮಿ, ನಿಮ್ಮಾಹಾರಕೆ
ತುಂಬಿದ ಒಂಟೆಯೆ ಸರಿ ತಡವೇತಕೆ?'

*　　*　　*

ಸಿಂಗವಾಗ ನುಡಿಯಿ' ತಯ್ಯೊ,
ಪಾಪವದನು ಕಾವೆನೆಂದು






"ಮಾರಂಗ"

ಎನ್ನ ತಿನ್ನಿರೆಂದು ಹೀಗೆ
ಸಿಂಹನ ನೊತ್ತಾಯಿಸಿದುವು
ಮುಂದುವರಿಯುತೆ.
ನನ್ನಿಯವರ ಕೊಲ್ಲಲಾರೆ
ಎನ್ನುತಿತ್ತು ಹಸಿದಸಿಂಗ
ಇನ್ನು ಸುಮ್ಮನಿಹು ದಯೋಗ್ಯ
ವೆಂದು ಎಣಿಸುತೆ
ಮುಂದೆ ಬಂದು 'ಎನ್ನ ತಿನ್ನಿ
ರೆ'ಂದು ಒಂಟೆ ಹೇಳೆ ಸಿಂಹ
ಒಂದೆ ಹಾರು ಹಾರಿಯದನು
ಕೊಂದು ತಿಂದಿತು!

ಮಾತುಕೊಟ್ಟ ನಾನೆ ಈಗ
ಮೋಸ ಮಾಡ್ವುದೆ?
ನಂಬಿದವನ ಮೋಸಗೈದು
ತುಂಬಿಸುವುದಕಿಂತ ಹೊಟ್ಟೆ
ಹುಂಬಜೀವ ಹೋದರೇನು?–
ಹೀಗೆ ಬಾಳ್ವುದೆ?"
ಮಾಯದ ನರಿ ಕೇಳಿತಿಂತು:
'ತನ್ನ ತಿನ್ನಿರೆಂದು ಒಂಟೆ
ತಾನೆ ಹೇಳಲಾಗ ನೀವು ತಿಂಬಿರಲ್ಲವೆ?'
'ಓವೊ ತಿಂಬೆ'ನೆಂದು ಸಿಂಹ
ಓಲಾಡಿಸೆ ತನ್ನ ತಲೆಯ
ಹುಲಿ ನರಿ ಕಾಗೆಗಳು ಅದನು
ಸುತ್ತಿಕೊಂಡವೇ.
'ಎನ್ನ ತಿನ್ನಿ–ಎನ್ನ ತಿನ್ನಿ–






# ಗಯ್ಯಾಳಿ ಗಂಗಮ್ಮ

ಕೆಲವು ವರ್ಷಗಳ ಹಿಂದೆ ಒಂದಾನೊಂದು ಗ್ರಾಮದಲ್ಲಿ ರಾಮಯ್ಯನೆಂಬ ಒಬ್ಬ ಒಕ್ಕಲಿಗ ನಿದ್ದನು. ಆತನ ಹೆಂಡತಿಯ ಹೆಸರು ಗಂಗಮ್ಮ. ಗಂಗಮ್ಮ ಗಯ್ಯಾಳಿ, ಬಜಾರಿ.

ಒಂದು ದಿನ ರಾಮಯ್ಯ ದಂಪತಿಗಳು ನೆರೆಯೂರಿನಲ್ಲಿದ್ದ ತಮ್ಮ ಬಂಧುಗಳ ಮನೆಯಲ್ಲಿ ನಡೆದ ಸಮಾರಂಭಕ್ಕೆ ಹೋಗಿ, ಕಾಲುನಡಿಗೆಯಲ್ಲಿ ಮನೆಗೆ ಹಿಂತಿರುಗುತ್ತಿದ್ದರು. ಮುಸುಕು ಕತ್ತಲಾಗುತ್ತಿದೆ. ಗ್ರಾಮವು ಇನ್ನು ಒಂದಷ್ಟು ದೂರದಲ್ಲಿತ್ತು. ಆಗ ದಾರಿಯಲ್ಲಿ ಒಂದು ಮಾವಿನಮರ ಕಾಣಿಸಿತು. ಆ ಮರದ ತುಂಬಾ ಮಾವಿನ ಹಣ್ಣುಗಳಿದ್ದವು.

"ಆ ಮರ ಹತ್ತಿ ಕೆಲವು ಮಾವಿನ ಹಣ್ಣುಗಳನ್ನು ಕಿತ್ತುಕೊಡಿ. ಈ ವರ್ಷ ಮಾವಿನ ಹಣ್ಣಿನ ವಾಸನೆಯನ್ನೇ ನೋಡಲಿಲ್ಲ" ಎಂದಳು ಗಯ್ಯಾಳಿ ಗಂಗಮ್ಮ.

"ಈಗ ಬಹಳ ಹೊತ್ತಾಗಿಬಿಟ್ಟಿದೆ. ಬೇಕಾದರೆ ನಾಳೆ ಒಂದು ಬುಟ್ಟಿತುಂಬಾ ತರಿಸಿಕೊಡುವೆ" ಎಂದ ರಾಮಯ್ಯ.

"ನನಗೆ ಈಗಲೇ ಬೇಕು; ಅಲ್ಲ, ಮರ ಹತ್ತಿ ಕೆಲವು ಕಿತ್ತುಕೊಡಿ ಅಂದರೆ ನಾಳೆ ಬುಟ್ಟಿತುಂಬಾ ತರಿಸುತ್ತೇನೆ ಎಂತ ಹೇಳ್ತಾನೆ ಸರದಾರ" ಎಂದು ಕೆಣಕಿ ನುಡಿದಳು. ತನ್ನ ಹಠ ಬಿಡಲಿಲ್ಲ ಗಂಗಮ್ಮ.

ಗತ್ಯಂತರವಿಲ್ಲದೆ ರಾಮಯ್ಯ ಮರವನ್ನೇರಲು ಅದರ ಹತ್ತಿರಕ್ಕೆ ಹೋದ. ಆತನು ಮರದಡಿ ಹೋದನೋ ಇಲ್ಲವೋ, ಯಾರೋ ಒಬ್ಬರು ಮರದಮೇಲಿನ ಕೊಂಬೆಯಿಂದ ಆತನಮೇಲೆ ಬಿದ್ದರು. ರಾಮಣ್ಣ ಧೊಪ್ಪನೆ ಕೆಳಗೆ ಕುಸಿದುಬಿದ್ದ. ಕಾಲು ಉಳುಕಿತು.

"ಅಯ್ಯೋ, ಅಮ್ಮಾ, ನಿನಗೆಷ್ಟು ಸೊಕ್ಕು. ಬೇಕೆಂತಲೇ ನನ್ನ ಗಂಡನಮೇಲೆ ಬೀಳುವೆಯಾ? ಹಾಂ" ಎಂದು ಕೆಳಗೆ ಬಿದ್ದ ವ್ಯಕ್ತಿಯನ್ನು ಮನಸ್ವೀ ಬಯ್ದಳು ಗಂಗಮ್ಮ.

ಆ ಮನುಷ್ಯನು ಎದ್ದು ನಿಂತುಕೊಂಡು, ರಾಮಯ್ಯನಿಗೆ ಕೈಕೊಟ್ಟು ಎಬ್ಬಿಸಿ "ಅಮ್ಮಾ ತಾಯೀ, ನಾನು ಕಾಲುಜಾರಿಬಿದ್ದೆ. ಬೇಕೆಂದು ಹಾಗೆ ಮೇಲೆ ಬೀಳಲಿಲ್ಲ. ನನ್ನ ಮಾತಿಗೆ

ಕೆ. ಶಿವರಾಮಕೃಷ್ಣ

ದೇವರೇ ಸಾಕ್ಷಿ" ಎಂದು ತಿಳಿಯಹೇಳಿದ. ಆದರೆ ಗಯ್ಯಾಳಿ ಗಂಗಮ್ಮ ಆ ಮಾತುಗಳನ್ನು ಕಿವಿಯಮೇಲೆ ಹಾಕಿಕೊಳ್ಳಲಿಲ್ಲ.

"ನಿನ್ನನ್ನು ಏನು ಮಾಡುವೆನೋ ನೋಡು. ನಿನ್ನ ಸುಳ್ಳುಪಳ್ಳು ಈ ಗಂಗಮ್ಮನ ಹತ್ತಿರ ನಡೆಯಾಕಿಲ್ಲ" ಎಂದು ಕೂಗಾಡಲು ಪ್ರಾರಂಭಿಸಿದಳು ಆ ಮಹಾರಾಯಿತಿ.

ರಾಮಯ್ಯ ದಂಪತಿಗಳು ತಮ್ಮ ಊರು ಸೇರಿಕೊಂಡ ಕೂಡಲೇ ಆ ಊರಿನ ನ್ಯಾಯಾಧಿಕಾರಿಯ ಹತ್ತಿರಕ್ಕೆ ಹೋಗಿ ತನ್ನ ಅವಸ್ಥೆ ಹೇಳಿಕೊಂಡಳು ಗಂಗಮ್ಮ.

ನ್ಯಾಯಾಧಿಕಾರಿ ರಾಮಯ್ಯನಮೇಲೆ ಬಿದ್ದ ಬಸಪ್ಪನನ್ನು ಕರೆಯಿಸಿದ.

ಎಲ್ಲರೂ ಹೇಳಿಕೆ ಕೊಟ್ಟ ತರುವಾಯ ನ್ಯಾಯಾಧಿಕಾರಿಗೆ ಬಸಪ್ಪನು ಬುದ್ಧಿಪೂರ್ವಕವಾಗಿ ತಪ್ಪು ಮಾಡಲಿಲ್ಲವೆಂದು ತೋರಿತು. ಈಸಾರಿ ಬಸಪ್ಪನನ್ನು ಕ್ಷಮಿಸುವಂತೆ ಗಂಗಮ್ಮನಿಗೆ ಸಲಹೆ ಕೊಟ್ಟ ನ್ಯಾಯಾಧಿಕಾರಿ.

ಅದನ್ನು ಕೇಳಿ ಗಂಗಮ್ಮ ರೋಷದಿಂದ "ಇದೇನೋ ನಿಮ್ಮ ನ್ಯಾಯ? ಈ ಕೇಡಿಗನು ಮಾವಿನ ಮರದ ಮೇಲೆ ಹೊಂಚಿಹಾಕಿಕೊಂಡಿದ್ದು ನಮ್ಮ ಯಜಮಾನರು ಬರುತ್ತಿರುವುದನ್ನು ನೋಡಿ ಅವರ ಮೇಲೆ ಹಾರಿದ್ದಾನೆ. ನಿಮ್ಮ ಕೈಯಲ್ಲಿ ಆಗದಿದ್ದರೆ ಹೇಳಿಬಿಡಿ, ನಾನು ಬೇರೊಂದು ಸ್ಥಳಕ್ಕೆ ಹೋಗಿ ಅಲ್ಲಿ ನ್ಯಾಯ ಪಡೆಯುವೆನು" ಎಂದಳು.

"ಸರಿ ಹಾಗಾದರೆ ನಿನಗೆ ಬೇಕಾದ ನ್ಯಾಯ ನಾನು ಹೇಳುವೆನು. ಆ ಮಾವಿನ ಮರವನ್ನು ನೀನೇ ಹತ್ತು. ಬಸಪ್ಪನ ಮೇಲೆ ಹಾರು" ಎಂದ ನ್ಯಾಯಾಧಿಕಾರಿ.

"ನಾನು ಮರವೇರಲೇ? ಒಂದು ವೇಳೆ ಆ ಮನುಷ್ಯನಮೇಲೆ ಬೀಳಹೋಗಿ ಕೆಳಗೆ ಬಿದ್ದರೆ ನನಗೆ ಏಟು ತಾಕುವುದಿಲ್ಲವೇ" ಎಂದಳು ಗಂಗಮ್ಮ.

"ಈ ಅನುಮಾನ ಬಸಪ್ಪನಿಗೂ ಇದ್ದಿರಬೇಕಷ್ಟೇ. ಬೇಕೆಂದು ಬೀಳಲಿಲ್ಲವೆಂದು ಬಸಪ್ಪ ಹೇಳಿದರೆ ನೀನು ನಂಬಲಿಲ್ಲ" ಎಂದ ನ್ಯಾಯಾಧಿಕಾರಿ. ಗಂಗಮ್ಮನ ತಲೆತಗ್ಗಿತು. ಅವಳು ಬುದ್ಧಿ ತಂದುಕೊಂಡು ಗಂಡನೊಂದಿಗೆ ಮನೆ ಸೇರಿಕೊಂಡಳು.





# ತಪಸ್ಸಿನ ಫಲ

**ಪೂ**ರ್ವಕಾಲದಲ್ಲಿ ರಾಜವರ್ಧನನೆಂಬ ಒಬ್ಬ ರಾಜನಿದ್ದನು. ಪ್ರಜೆಗಳಿಗೆ ಆತನೆಂದರೆ ತುಂಬಾ ಪ್ರೀತಿ, ಭಕ್ತಿ. ರಾಜನೂ ಜನರನ್ನು ತನ್ನ ಮಕ್ಕಳಂತೆ ನೋಡಿಕೊಳ್ಳುತ್ತಿದ್ದನು.

ಒಂದು ದಿನ ರಾಣಿ ಗಂಡನಿಗೆ ಎಣ್ಣೆ ಎರೆದು ಸ್ನಾನಮಾಡಿಸುತ್ತಿರುವಾಗ ಆಕೆಯ ಕಣ್ಣಿಂದ ನೀರು ಮಿಡಿಯಿತು. ಅದನ್ನು ಕಂಡು ರಾಜನು ಕಾರಣವೇನೆಂದು ವಿಚಾರಿಸಿದನು. ಅದಕ್ಕೆ ರಾಣಿ "ನಾಥಾ, ಕಾರಣವೇನೆಂದು ಹೇಳಲಿ? ನಿಮ್ಮ ತಲೆಗೂದಲು ನೆರೆತುಹೋಗುತ್ತಿವೆ. ವೃದ್ಧಾಪ್ಯ ಸಮೀಪಿಸುತ್ತಿರುವುದಲ್ಲಾ ಎಂದು ನನಗೆ ಸಂಕಟವಾಗುತ್ತಿದೆ" ಎಂದು ಹೇಳಿ ಕಣ್ಣೀರನ್ನು ಒರೆಸಿಕೊಂಡಳು.

ಇದನ್ನು ಕೇಳಿ ರಾಜನು "ಇಷ್ಟಕ್ಕಾಗಿ ನೀನು ಸಂಕಟಪಡಬೇಕೆ? ಮುಪ್ಪು ಎಲ್ಲರಿಗೂ ಬರುತ್ತದೆ. ಅದರ ನಂತರ ಮರಣವೂ ಹಿಂಬಾಲಿಸುತ್ತದೆ. ಇದು ಸಹಜ. ಇಂದಿಲ್ಲದಿದ್ದರೆ ನಾಳೆಯಾದರೂ ನಾವು ಸಾಯಲೇಬೇಕು. ಅದಕ್ಕಾಗಿ ಇಷ್ಟೊಂದು ಚಿಂತೆ ಏಕೆ?" ಎಂದು ಸಮಾಧಾನಮಾಡಿದನು.

ಆದರೆ ರಾಣಿಯ ಚಿಂತೆ ಕಡಿಮೆಯಾಗಲಿಲ್ಲ. ತನ್ನ ಗಂಡನಿಗೆ ಆಯುಸ್ಸು ಹೆಚ್ಚುವಂತೆ ಮಾಡಬೇಕೆಂದು ಆಕೆ ಎಲ್ಲ ದೇವತೆಗಳನ್ನೂ ಪ್ರಾರ್ಥಿಸುತ್ತಿದ್ದಳು. ಹೆಂಡತಿಯ ಚಿಂತೆಯನ್ನು ಕಂಡು ರಾಜವರ್ಧನನೂ ಸಹ ಕಳವಳಗೊಂಡು ದಿನೇ ದಿನೇ ಕೃಶನಾಗುತ್ತಿದ್ದನು. ಆತನು ಕ್ರಮೇಣ ರಾಜ್ಯವ್ಯವಹಾರದಿಂದ ವಿಮುಖನಾದನು.

ಪರಿಸ್ಥಿತಿ ಹದಗೆಡುತ್ತಿರುವುದನ್ನು ನೋಡಿ ಮಂತ್ರಿಗೆ ಸುಮ್ಮನಿರಲು ಸಾಧ್ಯವಾಗಲಿಲ್ಲ. ವೃದ್ಧಾಪ್ಯದೊಂದಿಗೆ ಮಾನಸಿಕ ಆರೋಗ್ಯವನ್ನೂ ಸಹ ಕೆಡಿಸಿಕೊಳ್ಳುತ್ತಿರುವ ರಾಜನು ಇದೀಗ ಪಕ್ಕಕ್ಕೆ ಸರಿಯುವುದೇ ರಾಜ್ಯಕ್ಕೆ ಹಿತಕರವೆಂದು ಆತನು ಗ್ರಹಿಸಿದನು. ರಾಜ್ಯಭಾರದ ಹೊಣೆಯನ್ನು ಹೊರಲು ರಾಜವರ್ಧನನ ಹಿರಿಯ ಮಗನಿದ್ದ. ಒಂದು ದಿನ ಮಂತ್ರಿ ರಾಜನೊಂದಿಗೆ ಮುಚ್ಚುಮರೆಯಿಲ್ಲದೆ

ವ್ಯಾ. ಶಾ ಮಣ್ಣ

ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದನು. ರಾಜನಿಗೂ ಈ ಸೂಚನೆ ಸೂಕ್ತವಾಗಿ ತೋರಿತು. ತನ್ನ ಹಿರಿಯ ಮಗನಿಗೆ ಪಟ್ಟಾಭಿಷೇಕ ಮಾಡಿ, ತಾನು ತಪಸ್ಸನ್ನಾಚರಿಸಲು ಕಾಡಿಗೆ ಹೋಗುವುದೆಂದು ನಿರ್ಧರಿಸಿದ. ಮಾರನೇಯ ದಿನವೇ ರಾಜಪುರೋಹಿತನನ್ನು ಬರಮಾಡಿಕೊಂಡು, ಒಂದು ಮುಹೂರ್ತವನ್ನಿಡುವಂತೆ ಹೇಳಿದ.

ಆದರೆ ಪ್ರಜೆಗಳು ಸುಮ್ಮನಿರಲಿಲ್ಲ. ಅವರು ಮಹಾರಾಜನನ್ನು ಕುರಿತು "ಪ್ರಭೂ, ಇಷ್ಟು ದಿನವೂ ನಮ್ಮನ್ನು ಹೆತ್ತ ಮಕ್ಕಳಂತೆ ಪಾಲಿಸಿದಿರಿ. ಇಂದು ನಮ್ಮನ್ನು ಬಿಟ್ಟು ತೆರಳುವಿರೆಂದು ತಿಳಿದು ನಮಗೆ ತುಂಬಾ ಖೇದವಿನಿಸುತ್ತಿದೆ. ನೀವಿಲ್ಲೇ ಇದ್ದುಬಿಡಿ. ನಮ್ಮ ಮಾತನ್ನು ತಿರಸ್ಕರಿಸುವಿರಾದರೆ ನಾವೂ ಸಹ ನಿಮ್ಮೊಂದಿಗೆ ಕಾಡಿಗೆ ಬರುವೆವು" ಎಂದರು.

ಅದಕ್ಕೆ ರಾಜನು "ಮಾನವನಾಗಿ ಹುಟ್ಟಿದಾಗಲೇ ಮರಣವೂ ಹಿಂಬಾಲಿಸುವುದು. ಪ್ರತಿಯೊಬ್ಬರೂ ಸಾಯಲೇಬೇಕು. ನಾನು ಅಡವಿಗೆ ಹೋಗದಿದ್ದರೂ ಸಹ ನನ್ನನ್ನು ಮರಣವು ಬೆನ್ನಾಡುತ್ತಲೇ ಇರುತ್ತದೆ. ಆದುದರಿಂದ ಈ ಮುದಿತನದಲ್ಲಿಯಾದರೂ ತಪಸ್ಸು ಮಾಡುತ್ತಾ ಕಾಲ ಕಳೆಯುವೆನು. ನೀವೇನು ಭಯಬೀಳಬೇಕಾಗಿಲ್ಲ. ನಿಮಗೆ ಮತ್ತೊಬ್ಬ ರಾಜನನ್ನು ನಿಯಮಿಸಿಯೇ ಹೋಗುತ್ತೇನೆ" ಎಂದು ಸಮಜಾಯಿಸಿ ಹೇಳಿದನು. ಆದರೂ ಪ್ರಜೆಗಳು ಸುಮ್ಮನಿರಲಿಲ್ಲ.




ಅವರೆಲ್ಲ ಪುಣ್ಯಕ್ಷೇತ್ರಗಳಿಗೆ ಹೋಗಿ ತಮ್ಮ ರಾಜನಿಗೆ ದೀರ್ಘಾಯುಸ್ಸು ಕೊಡುವಂತೆ ದೇವರನ್ನು ಕುರಿತು ತಪಸ್ಸು ಮಾಡಿದರು. ಆರೀತಿ ಅವರು ತಿಂಗಳುಗಟ್ಟಳೆ ತಪಸ್ಸನ್ನಾಚರಿಸಿದರು. ಆಗ ಅವರಿಗೆ ಒಬ್ಬ ಗಂಧರ್ವನು ಪ್ರತ್ಯಕ್ಷನಾಗಿ "ನೀವೆಲ್ಲರೂ ಕಾಮರೂಪ ಪರ್ವತಕ್ಕೆ ಹೋಗಿ ಪ್ರತ್ಯಕ್ಷ ದೇವನಾದ ಸೂರ್ಯನನ್ನು ಕುರಿತು ತಪಸ್ಸು ಮಾಡಿ" ಎಂದು ಹೇಳಿ ಅದೃಶ್ಯನಾದನು.

ಆ ಹಿರಿಯರೆಲ್ಲರೂ ಸಂತೋಷಭರಿತರಾಗಿ ಕಾಮರೂಪ ಪರ್ವತಕ್ಕೆ ಹೋಗಿ ಘೋರ ತಪವನ್ನು ಆಚರಿಸಿದರು. ಕೆಲವುಕಾಲವಾದ ಮೇಲೆ ಸೂರ್ಯಭಗವಾನನು ಪ್ರತ್ಯಕ್ಷನಾಗಿ "ನಿಮ್ಮ ಕೋರಿಕೆಯಂತೆ ರಾಜವರ್ಧನನು

ಸಾವಿರವರ್ಷಕಾಲ ಜೀವಿಸುವನು" ಎಂದು ಹೇಳಿ ಅಂತರ್ಧಾನ ಹೊಂದಿದನು.

ತಮ್ಮ ತಪಸ್ಸು ಫಲಿಸಿತಲ್ಲಾ ಎಂದು ಅವರೆಲ್ಲರೂ ಆನಂದ ಹೊಂದಿದರು. ಮಹಾರಾಜನಿಗೆ ಈ ಸುದ್ದಿ ತಿಳಿಸಿದರು. ಆದರೆ ರಾಜನು ಈ ವಾರ್ತೆ ಕೇಳಿ ಸಂತೋಷಪಡಲಿಲ್ಲ; ಖಿನ್ನನಾದನು. ಅದನ್ನು ಕಂಡು ರಾಣಿ "ನಾಥಾ, ಪ್ರಜೆಗಳು ತಮ್ಮ ಅನನ್ಯ ಭಕ್ತಿಯಿಂದ ಸೂರ್ಯ ಭಗವಾನನನ್ನು ಪ್ರಾರ್ಥಿಸಿ, ವರ ಸಂಪಾದಿಸಿಕೊಂಡು ಬಂದಿರುವಾಗ ನೀವೇಕೆ ವ್ಯಾಕುಲ ಚಿತ್ತರಾಗಿರುವಿರಿ?" ಎಂದು ಕೇಳಿದಳು.

ಅದಕ್ಕೆ ರಾಜನು "ರಾಣಿ, ನೀನು ಹೇಳಿದ ಮಾತೇನೋ ಸರಿ. ನನ್ನ ಪ್ರಜೆಗಳು ನನಗಾಗಿ ಇಷ್ಟೊಂದು ಪಾಡುಪಟ್ಟು ವರವನ್ನು ಪಡೆದರು. ನಾನು ಸಾವಿರವರ್ಷ ಜೀವಿಸುತ್ತೇನೆ. ಆದರೆ ನನ್ನಲ್ಲಿ ವಿಶ್ವಾಸವಿರುವ ಈ ಪ್ರಜೆಗಳೂ ಸಹ ಸಾವಿರವರ್ಷ ಜೀವಿಸದಿದ್ದರೆ ನನಗೆಲ್ಲಿಯ ಸಂತೋಷ? ಆದುದರಿಂದ ನಾನೂ ಸಹ ನನ್ನ ಪ್ರಜೆಗಳಿಗೆ ನಾನು ಜೀವಿಸಿರುವಷ್ಟು ದಿನ ಆಯುಸ್ಸನ್ನು ಕೊಡುವಂತೆ ಆ ಭಗವಂತನನ್ನು ಪ್ರಾರ್ಥಿಸುವೆನು" ಎಂದು ಹೇಳಿ ಕಾಮರೂಪ ಪರ್ವತಕ್ಕೆ ಹೋಗಿ ಭೀಕರ ತಪಸ್ಸು ಮಾಡಲು ಪ್ರಾರಂಭಿಸಿದನು.

ಒಂದೆರಡು ವರ್ಷ ಕಳೆದವು. ರಾಜ್ಯ ವ್ಯವಹಾರಗಳು ಅವ್ಯವಸ್ಥೆಯಾಯಿತು. ಆದರೂ ಪ್ರಜೆಗಳು ಆದರ್ಶ ಜೀವಿಗಳಾದುದರಿಂದ ಗೊಂದಲವೇನೂ ಏರ್ಪಡಲಿಲ್ಲ. ತಮ್ಮ ರಾಜನು ಮಾಡುತ್ತಿರುವ ತಪಸ್ಸು ಎಂದಿಗೆ ಫಲಿಸುವುದೋ ಎಂದು ಪ್ರಜೆಗಳು ಚಾತಕ ಪಕ್ಷಿಗಳಂತೆ ಎದುರು ನೋಡುತ್ತಿದ್ದರು. ಪ್ರತಿದಿನಾ ಸಾವಿರಾರುಜನ ಪರ್ವತದ ಹತ್ತಿರಕ್ಕೆ ಹೋಗಿ ರಾಜನ ದರ್ಶನ ಪಡೆಯುತ್ತಿದ್ದರು.

ಕಟ್ಟಕಡೆಗೆ ಸೂರ್ಯಭಗವಾನನು ರಾಜವರ್ಧನನ ದೀಕ್ಷೆಗೆ ಮೆಚ್ಚಿ, ಪ್ರತ್ಯಕ್ಷನಾಗಿ "ಎಲೈರಾಜನೇ, ನಿನ್ನ ಸದ್ಬುದ್ಧಿಗೆ ಮೆಚ್ಚಿದೆ. ನೀನು ಜೀವಿಸಿರುವಷ್ಟು ಕಾಲವೂ ನಿನ್ನ ಪ್ರಜೆಗಳು ಜೀವಂತರಾಗಿರುವರು" ಎಂದು ವರವನ್ನು ಕೊಟ್ಟು, ಅಂತರ್ಧಾನನಾದನು.

ರಾಜವರ್ಧನನೂ ಆತನ ಪ್ರಜೆಗಳೂ ಸಾವಿರ ವರ್ಷ ಸುಖವಾಗಿ ಕಾಲಕಳೆದರು.






**ಪೂ**ರ್ವಕಾಲದಲ್ಲಿ ಬ್ರಹ್ಮದತ್ತನು ಕಾಶೀ ರಾಜ್ಯವನ್ನು ಪರಿಪಾಲಿಸುತ್ತಿರುವಾಗ, ಬೋಧಿಸತ್ವನು ಆ ಸಮೀಪದಲ್ಲಿಯೇ ಒಬ್ಬ ಸಂಪನ್ನ ಗೃಹಸ್ಥನ ಮಗನಾಗಿ ಜನಿಸಿದನು. ಬೋಧಿಸತ್ವನು ಸಣ್ಣ ವಯಸ್ಸಿನಲ್ಲಿಯೇ ಸಮಸ್ತವಾದ ವಿದ್ಯೆಗಳನ್ನು ಕಲಿತುಕೊಂಡ. ಪ್ರಾಪ್ತವಯಸ್ಸು ಬಂದಕೂಡಲೇ ಆತನ ಮಾತಾಪಿತರು ಕಾಶೀ ನಗರದಲ್ಲೇ ಒಂದು ಸಂಬಂಧವನ್ನು ನೋಡಿದರು. ಬೋಧಿಸತ್ವನಿಗೆ ಸುಜಾತ ಎಂಬ ಕನ್ಯೆಯನ್ನು ತಂದು ವಿವಾಹ ಮಾಡಿದರು. ಸುಜಾತ ಸೌಂದರ್ಯವತಿ ಮಾತ್ರವೇ ಅಲ್ಲ, ಸುಗುಣವಂತಳೂ, ಮತ್ತು ಬುದ್ಧಿವಂತಳೂ ಆಗಿದ್ದಳು. ಅತ್ತ ಗಂಡನಿಗೂ, ಇತ್ತ ಅತ್ತೆಮಾವಂದಿರಿಗೂ ಮತ್ತು ಎಲ್ಲರಿಗೂ ಅಚ್ಚುಮೆಚ್ಚಿನವಳಾದಳು.

ಆಕೆಯಲ್ಲಿ ಬೋಧಿಸತ್ವನಿಗೂ ಸಹ ಅಪಾರ ಅನುರಾಗವುಂಟಾಗಿತ್ತು. ಆ ದಂಪತಿಗಳು ಒಂದೇಮಾತು, ಒಂದೇ ಮನಸ್ಸಿನಿಂದ ಕೂಡಿ, ನೋಡಲು ತುಂಬಾ ಚೆಂದಾಗಿದ್ದರು.

ಹೀಗೆ ಕೆಲವುಕಾಲ ಕಳೆದ ತರುವಾಯ ಒಂದುದಿನ ಸುಜಾತ ತನ್ನ ಪತಿಯೊಂದಿಗೆ "ನನಗೆ ನನ್ನ ತಾಯಿತಂದೆಗಳನ್ನು ನೋಡಬೇಕೆಂಬ ಅಪೇಕ್ಷೆಯುಂಟಾಗಿದೆ. ಅವರೋ ವೃದ್ಧರಾದರು. ನೀವು ಜೊತೆಯಲ್ಲಿ ಬಂದರೆ ಇಬ್ಬರೂ ಒಟ್ಟಿಗೆ ಹೋಗಿ ನೋಡಿಕೊಂಡು ಬರಬಹುದು" ಎಂದು ತನ್ನ ಅಭಿಲಾಷೆಯನ್ನು ತಿಳಿಸಿದಳು.

ಬೋಧಿಸತ್ವನಾದರೋ ಇದನ್ನು ಕೇಳಿ ಸಂತಸಗೊಂಡನು. "ಆಗಲಿ, ಹಾಗೆಯೇ ಹೋಗುವ. ನನಗೂ ಸಹ ಅತ್ತೆ ಮಾವಂದಿರನ್ನು ನೋಡಬೇಕೆಂಬ ಆಶೆ ಬಹಳ ದಿನಗಳಿಂದ ಇದೆ. ಇಲ್ಲಿ ಕೆಲಸ ಕಾರ್ಯಗಳು ಅನೇಕವಾಗಿ ಇದ್ದುದರಿಂದ ಆ ಬಯಕೆಯನ್ನು ಬದಿಗೊತ್ತಬೇಕಾಯಿತು. ಇಲ್ಲದಿದ್ದ ಪಕ್ಷಕ್ಕೆ ನೀನು ಕೇಳುವ ಮೊದಲೇ ನಾನೇ ಹೊರಡೋಣವೆಂದು ಹೇಳುತ್ತಿದ್ದೆ" ಎಂದನು. ತಮ್ಮ ಪ್ರಯಾಣಕ್ಕೆ ಎಲ್ಲ ಸಿದ್ಧತೆಗಳನ್ನೂ ಮಾಡುವಂತೆ ಹೆಂಡತಿಗೆ ಹೇಳಿದನು.

ಹೆಚ್. ನಾರಾಯಣರಾವ್

ಎಲ್ಲಾ ಸಿದ್ಧವಾಯಿತು. ಸಾಮಾನುಗಳೆಲ್ಲವನ್ನೂ ಗಾಡಿಯಲ್ಲಿ ಹೇರಿದರು. ಗಾಡಿಯಲ್ಲಿ ಸುಜಾತ ಕುಳಿತುಕೊಂಡಳು. ಬೋಧಿಸತ್ವನು ಗಾಡಿ ಹತ್ತಿ ಕುಳಿತು, ಗಾಡಿಯನ್ನು ಓಡಿಸುತ್ತಿದ್ದ. ಅವರು ಕಾಶೀನಗರದ ಗಡಿಯನ್ನು ಸೇರಿದರು. ಅಲ್ಲೊಂದು ಮರದಕೆಳಗೆ ಗಾಡಿಯನ್ನು ಬಿಚ್ಚಿ, ಕೈಕಾಲು ತೊಳೆದುಕೊಂಡು, ತನ್ನೊಂದಿಗೆ ತಂದಿದ್ದ ತಿಂಡಿತೀರ್ಥಗಳನ್ನು ತಿಂದರು. ಸ್ವಲ್ಪಹೊತ್ತು ವಿಶ್ರಾಂತಿ ಪಡೆದು, ಮತ್ತೆ ಗಾಡಿ ಕಟ್ಟಿಕೊಂಡು, ನಗರ ಪ್ರವೇಶ ಮಾಡಿದರು.

ಆ ಸಮಯಕ್ಕೆ ಸರಿಯಾಗಿ, ಆನೆ ಅಂಬಾರಿಯಮೇಲೆ ಕುಳಿತಿದ್ದ ಕಾಶೀರಾಜನ ಮೆರವಣಿಗೆ ನಡೆಯುತಿತ್ತು. ಆ ಮೆರವಣಿಗೆಯನ್ನು ನೋಡಬೇಕೆಂದು ಸುಜಾತಳಿಗೆ ಆಶೆ ಆಯಿತು. ಗಂಡನ ಅನುಮತಿಪಡೆದು, ಆಕೆ ಗಾಡಿಯಿಂದ ಕೆಳಗೆ ಇಳಿದು, ಹಾಗೇ ನಡೆದು ಕೊಂಡು ಹೋಗುತ್ತಿದ್ದಳು.

ಅಂಬಾರಿಯಮೇಲೆ ಇದ್ದ ಕಾಶೀರಾಜನು ಅಕಸ್ಮಾತ್ತಾಗಿ ಅತಿ ಸುರೂಪಿಯಾದ ಸುಜಾತಳನ್ನು ನೋಡಿದನು. ತತ್ ಕ್ಷಣ ಆಕೆಯನ್ನು ಮದುವೆಯಾಗಬೇಕೆಂಬಹಂಬಲ ಆತನಲ್ಲಿ ಸ್ಫುರಿಸಿತು. ಆಕೆಯ ವಿಷಯವನ್ನೆಲ್ಲಾ ತಿಳಿದುಕೊಂಡು ಬರುವಂತೆ ಗೂಢಚಾರರನ್ನು ಕಳುಹಿಸಿದನು. ಅವರು ತನಿಖೆಮಾಡಲು, ಆಕೆ ಇಂತಹವರ ಮಗಳೆಂದೂ, ಆ ಗಾಡಿಯಲ್ಲಿ ಕುಳಿತಿರುವಾತನು ಆಕೆಯ ಪತಿ ಎಂದೂ ತಿಳಿದುಬಂತು. ಎಲ್ಲ ವಿಷಯವನ್ನು ರಾಜನಲ್ಲಿ






ಅರಿಕೆ ಮಾಡಿದರು. ಆಗ ರಾಜನಿಗೊಂದು ದುರಾಲೋಚನೆ ಹೊಳೆಯಿತು. ಹೇಗಾದರೂ ಸುಜಾತಳನ್ನು ತನ್ನ ರಾಣಿಯನ್ನಾಗಿ ಮಾಡಿಕೊಳ್ಳಬೇಕೆಂದು, ಒಂದು ಸಂಚು ಮಾಡಿದ.

ನಂಬಿಗಸ್ಥನಾದ ಭಟನೊಬ್ಬನನ್ನು ಕರೆದು "ಎಲವೋ, ಏನೋ ಕಾರ್ಯದ ನಿಮಿತ್ತ ಓಡಾಡುತ್ತಿರುವವನಂತೆ ನಟಿಸಿ, ಯಾರಿಗೂ ತಿಳಿಯದಂತೆ ಇದನ್ನು ಆ ಗಾಡಿಯಲ್ಲಿಡು" ಎಂದು ಹೇಳಿ, ತನ್ನ ಸ್ವರ್ಣಕಿರೀಟವನ್ನು ಅವನ ಕೈಗೆ ಕೊಟ್ಟನು. ಆ ರಾಜಭಟನು ಅರಸನ ಆಜ್ಞೆಯ ಪ್ರಕಾರ ಬೋಧಿಸತ್ವನು ಮೈಮರೆತಿರುವ ಸಮಯನೋಡಿ, ಗಾಡಿಯಲ್ಲಿ ಆ ಕಿರೀಟವನ್ನಿಟ್ಟುಬಿಟ್ಟನು.

"ಮಹಾರಾಜರ ಕಿರೀಟ ಕಳೆದುಹೋಯಿತು" ಎಂಬ ಹಾಹಾಕಾರ ಎಲ್ಲೆಲ್ಲೂ ಹಬ್ಬಿತು. ಎಲ್ಲಿದ್ದವರನ್ನು ಅಲ್ಲಿಯೇ ನಿಲ್ಲಿಸಿ ಶೋಧಿಸುವಂತೆ ರಾಜಾಜ್ಞೆಯಾಯಿತು. ಭಟನೊಬ್ಬನು ಬೋಧಿಸತ್ವನ ಹತ್ತಿರಹೋಗಿ "ಎಲೈ, ನಿನ್ನ ಗಾಡಿಯನ್ನು ನಿಲ್ಲಿಸು" ಎಂದು ತಡೆದು ನಿಲ್ಲಿಸಿದನು. ಗಾಡಿಯನ್ನು ಶೋಧನೆ ಮಾಡಲು ಮಹಾರಾಜರ ಕಿರೀಟ ಸಿಕ್ಕಿತು. ಕೂಡಲೇ ಆ ಭಟನು "ಕಳ್ಳ ಸಿಕ್ಕಿಬಿದ್ದ" ಎಂದು ಹೇಳುತ್ತಾ ಬೋಧಿಸತ್ವನನ್ನು ಎಳೆದುಕೊಂಡು ಹೋಗಿ ರಾಜನ ಮುಂದೆ ನಿಲ್ಲಿಸಿದ.

ಕಾಶೀರಾಜನು ಕೋಪದಿಂದ ಕಿಡಿಕಿಡಿಯಾಗಿ ವಿಚಾರಣೆಯನ್ನು ಸಹ ನಡೆಸದೆ "ಇವನೇನೋ, ದುರ್ಮಾರ್ಗ. ಇವನ ತಲೆ ತೆಗೆದುಬಿಡಿ" ಎಂದು ಆಜ್ಞಾಪಿಸಿದ. ತನ್ನ ಹಂಚಿಕೆ ಸಫಲವಾದುದಕ್ಕೆ ಆ ದುರಳಭೂಪತಿ ಬಹಳ ಸಂತಸಪಟ್ಟನು. ರಾಜಾಜ್ಞೆಯ ಪ್ರಕಾರ ರಾಜಭಟರು ಬೋಧಿಸತ್ವನನ್ನು ಚಾಟಿಯಿಂದ ಥಳಿಸಿ, ರಾಜಬೀದಿಗಳಲ್ಲಿ ಮೆರವಣಿಗೆ ಮಾಡಿಸಿ, ಅವಮಾನಗೊಳಿಸಿ, ನಗರದಾಚೆ ಕರೆದುಕೊಂಡು ಹೋದರು.

ಸುಜಾತ ಅಳುತ್ತಾ ಬೋಧಿಸತ್ವನನ್ನು ಹಿಂಬಾಲಿಸುತ್ತಿದ್ದಳು. 'ಅಯ್ಯೋ, ನಿಮ್ಮ ಈ ದುರವಸ್ಥೆಗೆ ನಾನಲ್ಲವೇ ಕಾರಣಳು' ಎಂದು ಪರಿತಪಿಸಿದಳು. ತಲೆತೆಗೆಯಲು ತಳವಾರರು ಬೋಧಿಸತ್ವನನ್ನು ಬೋರಲು ಮಲಗುವಂತೆ ಹೇಳಿದರು. ಆಗ ಸುಜಾತ ತುಂಬಾ ವೇದನೆಯಿಂದ,

"ಅಮಾಯಕರನ್ನು ರಕ್ಷಿಸುವ ದೇವರಿಲ್ಲವೇ? ಸಾಧುಗಳನ್ನು ಕಾಪಾಡುವ ಸ್ವಾಮಿ ಇಲ್ಲವೇ?" ಎಂದು ವಿಲಪಿಸಿದಳು.

ಸುಜಾತ ಮಹಾ ಸಾಧ್ವಿಯಾದುದರಿಂದ ಅವಳ ಆರ್ತನಾದಕ್ಕೆ ಸ್ವರ್ಗದಲ್ಲಿ ದೇವೇಂದ್ರನ ಸಿಂಹಾಸನ ಗಡಗಡ ಅದುರಿತು.

"ಏನಿದು, ಆಶ್ಚರ್ಯ" ಎಂದು ದೇವೇಂದ್ರನು ಅಚ್ಚರಿಗೊಂಡು ದಿವ್ಯದೃಷ್ಟಿಯಿಂದ ನೋಡಿದನು. ಆತನಿಗೆ ವಿಷಯವೆಲ್ಲವೂ ತಿಳಿಯಿತು. ಆಗ ಆತನು ಒಂದು ಯುಕ್ತಿಯನ್ನು ಹೂಡಿದ.

ರಾಜನ ಸ್ಥಾನದಲ್ಲಿ ಬೋಧಿಸತ್ವನೂ, ಬೋಧಿಸತ್ವನ ಸ್ಥಳದಲ್ಲಿ ರಾಜನೂ ಇರುವಂತೆ ತನ್ನ ಮಹಿಮೆಯಿಂದ ಅವರ ಸ್ಥಾನಗಳನ್ನು ಅದಲು ಬದಲು ಮಾಡಿಬಿಟ್ಟ. ಇದು ಬೇರೆಯವರಿಗೆ ತಿಳಿಯುವಂತಿರಲಿಲ್ಲ.

ಆನೆ ಅಂಬಾರಿಯಮೇಲೆ ಕುಳಿತಿರುವಾತ ತಮ್ಮ ರಾಜನೆಂದೇ ಜನರೆಲ್ಲರೂ ಭಾವಿಸಿದ್ದರು. ಆತನು ರಾಜನ ಉಡುಪನ್ನು ಧರಿಸಿದ್ದ ಬೋಧಿಸತ್ವ! ತಳವಾರರ ವಶದಲ್ಲಿ ಬಲಿಪೀಠದ ಮೇಲೆ ಇದ್ದವನು ಬೋಧಿಸತ್ವನ ಬಟ್ಟೆ ಹಾಕಿಕೊಂಡಿದ್ದ ರಾಜ! ಈ ರಹಸ್ಯವನ್ನರಿಯದ ತಳವಾರರು ರಾಜಾಜ್ಞೆಯಂತೆ ತಮ್ಮ ಅಧೀನದಲ್ಲಿದ್ದ ವ್ಯಕ್ತಿಯ ತಲೆ ಕತ್ತರಿಸಿದರು. ಪ್ರಾಣ ಹೋದಕೂಡಲೇ ದುರ್ಮಾರ್ಗನಾದ ಕಾಶೀರಾಜನಿಗೆ ಆತನ ನಿಜಸ್ವರೂಪ ಬಂತು. ಆಗ ತಳವಾರರಿಗೆ ತಾವು ವಧೆಮಾಡಿದ್ದು ತಮ್ಮ ರಾಜನೆಂದು ತಿಳಿಯಿತು. ಅವರು ಬೆಚ್ಚಿಬಿದ್ದರು. ಎಲ್ಲರೂ ಗಾಬರಿಯಾದರು.

ಆಗ ದೇವೇಂದ್ರನು ಬೋಧಿಸತ್ವನಿಗೆ ಕಾಣಿಸಿಕೊಂಡನು. ಅಲ್ಲಿ ನೆರೆದಿದ್ದ ಜನಗಳಿಗೆ ಸಂಗತಿ ಸಂದರ್ಭಗಳನ್ನು ಸವಿವರವಾಗಿ ತಿಳಿಸಿ "ಈ ಬೋಧಿಸತ್ವನೇ ಇನ್ನುಮುಂದೆ ನಿಮಗೆ ಒಡೆಯ. ಸುಜಾತ ನಿಮ್ಮ ಪಟ್ಟದರಸಿ" ಎಂದು ಹೇಳಿ ಅಂತರ್ಧಾನ ಹೊಂದಿದನು. ಪಾಪಿಷ್ಠನಾದ ರಾಜನು ಮರಣಹೊಂದಿದುದಕ್ಕೆ ಪ್ರಜೆಗಳೆಲ್ಲರೂ ಆನಂದಪಟ್ಟರು. ದೇವೇಂದ್ರನ ಮಾತಿನಂತೆ ಬೋಧಿಸತ್ವನು ರಾಜನಾಗಿಯೂ, ಸುಜಾತ ರಾಣಿಯಾಗಿಯೂ ಇರಲು ಪ್ರಜೆಗಳು ಸಮ್ಮತಿಸಿದರು.





# ಅಹಂಕಾರ

ಬಹಳಕಾಲದ ಹಿಂದೆ ಕುಮುದನೆಂಬ ಮಹರ್ಷಿ ಮಹಾವಿಷ್ಣುವನ್ನು ಕುರಿತು ಘೋರ ತಪಸ್ಸು ಮಾಡಿದನು. ಕೆಲವು ಕಾಲದನಂತರ ಲಕ್ಷ್ಮೀಸಮೇತನಾಗಿ ಮಹಾವಿಷ್ಣು ಆತನಿಗೆ ಪ್ರತ್ಯಕ್ಷನಾಗಿ "ಎಲೈ ಭಕ್ತನೇ, ನಿನಗೆ ಬೇಕಾದ ವರವನ್ನು ಕೋರಿಕೋ" ಎಂದನು.

ಯಾವ ಬಯಕೆಯೂ ಇಲ್ಲದೆ, ಕೇವಲ ಆ ಮಹಾಮಹಿಮನ ದರ್ಶನಾಕಾಂಕ್ಷೆಯಿಂದ ಕಮುದನು ತಪಸ್ಸನ್ನು ಪ್ರಾರಂಭಿಸಿದ್ದನು. ಅಂತಹ ಸ್ಥಿತಿಯಲ್ಲಿ ವಿಷ್ಣು ವರವನ್ನು ಬೇಡಿಕೊಳ್ಳುವಂತೆ ಹೇಳಲು ಆತನು ತಬ್ಬಿಬ್ಬಾದನು. ಲಕ್ಷ್ಮೀದೇವಿಯು ಕುಮುದನ ಮನಸ್ಥಿತಿಯನ್ನು ಅರಿತು ಹೀಗೆಂದಳು: "ವತ್ಸಾ, ನಿನ್ನ ಭಕ್ತಿಗೆ ನಾವು ಮೆಚ್ಚಿದೆವು. ಮುಂದಾಲೋಚನೆಮಾಡದೆ ವರ ಬೇಡಬೇಕಾದ ಅಗತ್ಯವಿಲ್ಲ. ನಾವು ಮತ್ತೆ ಒಂದು ಮಾಸದ ನಂತರ ನಿನಗೆ ದರ್ಶನ ಕೊಡುವೆವು. ಯೋಚಿಸಿ, ಆಗ ನಿನಗೆ ಬೇಕಾದ ವರವನ್ನು ಕೇಳು."

ಲಕ್ಷ್ಮಿ ಈರೀತಿ ಹೇಳಲು ವಿಷ್ಣುವೂ ಅನುಮೋದಿಸಿದನು. ಕುಮುದನು ಸ್ಥಿರಚಿತ್ತನಾದನು. ಮರುಕ್ಷಣವೇ ವಿಷ್ಣು ಲಕ್ಷ್ಮೀದೇವಿ ಸಮೇತನಾಗಿ ಅದೃಶ್ಯನಾದನು. ಕುಮುದನು ಆಶ್ರಮಕ್ಕೆ ಹಿಂತಿರುಗಿ ತನ್ನ ಶಿಷ್ಯಕೋಟಿಗೆ ಈ ಶುಭಸೂಚಾರವನ್ನು ತಿಳಿಸಿದನು.

ಗುರುಗಳ ಅಮೋಘ ತಪೋಶಕ್ತಿಗೆ ಶಿಷ್ಯವರ್ಗವೆಲ್ಲಾ ಆಶ್ಚರ್ಯಚಕಿತರಾದರು. ಸಾಕ್ಷಾತ್ ಆ ಮಹಾವಿಷ್ಣುವೇ ಪ್ರತ್ಯಕ್ಷನಾಗಿ ವರವನ್ನು ಬೇಡಿಕೊಳ್ಳೆಂದರೂ ಸಹ ಬೇಡದಿದ್ದ ತಮ್ಮ ಗುರುಗಳ ತ್ಯಾಗವನ್ನು ಹೊಗಳಿ ಹಾಡಿದರು. ಈ ಹದಿನಾಲ್ಕು ಲೋಕಗಳಲ್ಲಿ ಇಂತಹ ಸರ್ವಸಂಗ ಪರಿತ್ಯಾಗಿಯೂ, ಮಹಾಭಕ್ತನೂ ಇಲ್ಲವೆಂದು ಕೊಂಡಾಡಿದರು. ಇವರ ಹೊಗಳಿಕೆಯಿಂದ ಕುಮುದನಲ್ಲಿ ಒಂದು ವಿಧವಾದ ಅಹಂಭಾವವು ತಲೆದೋರಿತು. ತನಗಿಂತಲೂ ಮಹರ್ಷಿ ಶ್ರೇಷ್ಠನು ಎಲ್ಲಿಯೂ ಇರಲಾರನೆಂದು ಭಾವಿಸತೊಡಗಿದನು.

ಸಿ. ಶಕುಂತಲಾದೇವಿ



ಈ ಸ್ಥಿತಿಯಲ್ಲಿ ಕುಮುದನು ಒಂದು ಬಾರಿ ಶಿಷ್ಯರೊಂದಿಗೆ ಗಂಗಾನದಿಗೆ ಸ್ನಾನಮಾಡಲು ಹೋದನು. ದಾರಿಯಲ್ಲಿ ಅವರಿಗೆ ಆಗತಾನೇ ಸ್ನಾನಮಾಡಿಕೊಂಡು ಬರುತ್ತಿದ್ದ ರೈವತನೆಂಬ ರಾಜರ್ಷಿ ಕಾಣಿಸಿದನು. ಹೆಂಡತಿ ಮತ್ತು ಹತ್ತು ಜನ ಮಕ್ಕಳಿದ್ದ ಈ ರೈವತನು ಹೇಗೆ ಮಹಾಋಷಿಯಾದನೆಂದು ಕುಮುದನ ಶಿಷ್ಯರಿಗೆ ಸಂಶಯವುಂಟಾಯಿತು. ತಮ್ಮ ಸಂಶಯ ನಿವಾರಣೆಗಾಗಿ ಅವರು ತಮ್ಮ ಗುರುವನ್ನು ಕೇಳಿದರು. ಆಗ ಕುಮುದನು, 'ಈ ರೈವತನು ಋಷಿ ಎಂಬ ಹೆಸರಿಗೆ ಹೇಗೆ ಅರ್ಹನೋ ನನಗೆ ತಿಳಿಯದು. ಸರ್ವಸಂಗ ಪರಿತ್ಯಾಗ ಮಾಡಿ, ಕಂದ ಮೂಲಗಳನ್ನು ತಿಂದು ಅಡವಿಯಲ್ಲಿ ವರ್ಷಾನುಗಟ್ಟಲೆ ತಪಸ್ಸು ಮಾಡುವಂತಹವರಿಗೇ ದೇವರ ದರ್ಶನವಾಗುವುದು ದುರ್ಲಭ" ಎಂದು ಕೊಂಕು ಮಾತನ್ನಾಡಿದ.

ಆತನು ಹಾಗೆಂದು ಹೇಳಿದನೇ ನೋ ಹೌದು. ಆದರೆ ಆ ಉತ್ತರ ಆತನಿಗೇ ಸಂತೃಪ್ತಿಕರವಾಗಿ ತೋರಲಿಲ್ಲ. 'ಮಹಾವಿಷ್ಣು ಇನ್ನು ಕೆಲವು ದಿನಗಳಲ್ಲೇ ಪ್ರತ್ಯಕ್ಷವಾಗುವನು. ಆಗ ಆತನನ್ನು ಕೇಳಿ ಸಂಶಯ ನಿವಾರಿಸಿಕೊಂಡರಾಯಿತು' ಎಂದುಕೊಂಡನು.

ಒಂದು ತಿಂಗಳಾದ ತರುವಾಯ ಮಹಾವಿಷ್ಣು ಲಕ್ಷ್ಮೀಸಮೇತನಾಗಿ ಕುಮುದನಿಗೆ ಪ್ರತ್ಯಕ್ಷನಾದನು. ವರಬೇಡುವ ವಿಷಯವನ್ನು ಮರೆತು, ಕುಮುದನು ರೈವತ ರಾಜರ್ಷಿಯನ್ನು ಕುರಿತು ತನಗಿದ್ದ ಸಂಶಯವನ್ನು ತೀರಿಸಬೇಕೆಂದು ವಿಷ್ಣುವನ್ನು ಕೇಳಿದನು.

ಅದಕ್ಕೆ ಮಹಾವಿಷ್ಣು ನಕ್ಕು "ಕುಮುದಾ ನನಗೆ ಭಕ್ತಿಪ್ರಧಾನ. ಮನಸ್ಸು ನಿರ್ಮಲವಿಲ್ಲದಿರುವಾಗ ಸನ್ಯಾಸ ಸ್ವೀಕರಿಸಿದರೆ ಮಾತ್ರವೇನಿದೆ? ಆದರೂ ನಿನ್ನ ಸಂಶಯ ನಿವಾರಣೆಯಾಗಬೇಕೆಂದರೆ ಶ್ರೀ ಶೈಲದ ಸಮೀಪದಲ್ಲಿರುವ ಸ್ವರ್ಣಾಗ್ರಹಾರಕ್ಕೆ ಹೋಗು. ಅಲ್ಲಿ ಸುಧರ್ಮನೆಂಬಾತನಿಂದ ನಿನ್ನ ಸಂಶಯ ನಿವಾರಣೆಯಾಗವುದು" ಎಂದು ಹೇಳಿ ಅಂತರ್ಧಾನ ಹೊಂದಿದನು.

ತರುವಾಯ ಕುಮುದನು ತನ್ನ ಪರಿವಾರದೊಂದಿಗೆ ಶ್ರೀ ಶೈಲಕ್ಕೆ ಪ್ರಯಾಣ ಹೊರಟನು. ಅಲ್ಲಿ ಒಂದು ದಿನ ಮುಂಜಾನೆ ಶಿಷ್ಯರೊಂದಿಗೆ ಪಾತಾಳಗಂಗೆಯಲ್ಲಿ ಸ್ನಾನ

ಮಾಡಲು ಹೋದನು. ಎಲ್ಲರೂ ಸ್ನಾನಮಾಡು ತ್ತಿರುವಾಗ ಒಂದು ಮೊಸಳೆ ಕುಮುದನ ಕಾಲನ್ನು ಹಿಡಿದು ನೀರಿನೊಳಕ್ಕೆ ಎಳೆಯಿತು.

ತಮ್ಮ ಗುರುವನ್ನು ಮೊಸಳೆ ನೀರಿನೊಳಕ್ಕೆ ಎಳೆಯುತ್ತಿರುವುದನ್ನು ಕಂಡು ಶಿಷ್ಯರು ಭಯ ಕಂಪಿತರಾಗಿ, ಬೊಬ್ಬೆಯಿಟ್ಟರು. ಆದರೆ ಕುಮುದನು ನಿರ್ಭಯವಾಗಿ ಅದರ ಕಡೆ ಒಂದುಸಾರಿ ದುರುಗುಟ್ಟಿಕೊಂಡು ನೋಡಿದನು. ಆತನ ತಪೋಶಕ್ತಿಯಿಂದ ಮರುಕ್ಷಣವೇ ಮೊಸಳೆ ವಿಲವಿಲನೆ ಒದ್ದಾಡಿ ಪ್ರಾಣ ಬಿಟ್ಟಿತು. ಈ ಸಂಘಟನೆಯಿಂದ ಕುಮುದನಿಗೆ ಮತ್ತಷ್ಟು ಅಹಂಭಾವ ಹೆಚ್ಚಾಯಿತು.

ಒಂದೆರಡು ದಿನಗಳ ತರುವಾಯ ಕುಮುದನು ಸ್ವರ್ಣಾಗ್ರಹಾರಕ್ಕೆ ಹೋದನು. ಆತನು ಅಲ್ಲಿಗೆ ಹೋಗುವ ಸಮಯಕ್ಕೆ ಸುಧರ್ಮನು ಮನೆಯಲ್ಲಿರಲಿಲ್ಲ. ಸುಧರ್ಮನ ಮಡದಿ ಆಗ ಬಾಗಿಲ ಪಕ್ಕದಲ್ಲೇ ಕುಳಿತುಕೊಂಡು ಹಳೆಯ ಸೀರೆಯೊಂದಕ್ಕೆ ತೇಪೆ ಹಾಕುತ್ತಿದ್ದಳು. ಕುಮುದನನ್ನು ನೋಡಿ, ತನ್ನ ಪತಿ ಬರುವ ವರೆವಿಗೂ ಹೊರಗಿದ್ದ ಜಗುಲಿಯ ಮೇಲೆ ಕುಳಿತುಕೊಳ್ಳುವಂತೆ ಹೇಳಿದಳು.

ಇದು ತನ್ನಂತಹ ಮಹಾತಪಸ್ವಿಗೆ ಉಚಿತ ಮರ್ಯಾದೆ ಅಲ್ಲವೆಂದು ಕುಮುದನಿಗೆ ಬಹಳ ಕೋಪಬಂತು. ಬಾಗಿಲಹತ್ತಿರ ಕುಳಿತಿದ್ದ ಸುಧರ್ಮನ ಸತಿಯಕಡೆ ತೀವ್ರದೃಷ್ಟಿಯಿಂದ ನೋಡಿದ. ಆದರೆ ಆಕೆ ಮೊಸಳೆಯ ಹಾಗೆ ವಿಲವಿಲನೆ ಒದ್ದಾಡಿ ಪ್ರಾಣಬಿಡಲಿಲ್ಲ!




ಇದರಿಂದ ಕುಮುದನಿಗೆ ತನ್ನ ತಪೋಶಕ್ತಿಯಲ್ಲಿ ಕೊಂಚ ಅಪನಂಬಿಕೆ ಯುಂಟಾಯಿತು. ಅಷ್ಟರಲ್ಲಿ ಸುಧರ್ಮನು ಅಲ್ಲಿಗೆಬಂದು ಅತಿಥಿಗಳನ್ನು ಮನೆಯೊಳಕ್ಕೆ ಬರುವಂತೆ ಬೇಡಿಕೊಂಡ. ತುಸ ಹೊತ್ತಿಗೆ ಅಡಿಗೆ ಸಿದ್ಧಮಾಡಿ, ಎಲ್ಲರಿಗೂ ಬಡಿಸಿದಳು ಸುಧರ್ಮನ ಸತಿ.

ಕುಮುದನು ಎಲೆಯಮುಂದೆ ಕುಳಿತುಕೊಂಡ. ಭಕ್ಷಗಳೆಲ್ಲಾ ಯಾವ ಕಾರಣದಿಂದಲೋ ತೀರಾ ತಣ್ಣಗಾಗಿತ್ತು. ಕುಮುದನಿಗೆ ಇದನ್ನು ನೋಡಿ ಬಹಳ ಕೋಪಬಂತು. ಆತನು "ಭಕ್ಷಗಳೆಲ್ಲಾ ತುಂಬಾ ಬಿಸಿಯಾಗಿವೆಯಲ್ಲಾ" ಎಂದು ಪರಿಹಾಸ್ಯಮಾಡಿದ.

ಸುಧರ್ಮನು ಕುಮುದನ ಪರಿಹಾಸ್ಯವನ್ನು ಗ್ರಹಿಸಿ "ಹಾಗಾದರೆ ಈ ಬೀಸಣಿಕೆ

ಯಿಂದ ಬೀಸುವೆನು" ಎಂದು ಬೀಸಣಿಕೆಯಿಂದ ಬೀಸಲು ತೊಡಗಿದ. ಅದರಿಂದ ಬಿಸಿ ಬಿಸಿಯಾದ ಗಾಳಿಬೀಸಲು ತೊಡಗಿತು.

ನಿಮಿಷಾರ್ಧದಲ್ಲಿ ಕುಮುದನ ಎಲೆಯಲ್ಲಿ ಬಡಿಸಿದ್ದ ಪದಾರ್ಥಗಳೆಲ್ಲಾ ಬಿಸಿಯಾಗಿ, ಹಬೆ ಬರಲು ಪ್ರಾರಂಭಿಸಿತು

ಕುಮುದನು ಆಶ್ಚರ್ಯಚಕಿತನಾದನು. ನಾಚಿಕೆಯಿಂದ ತಲೆತಗ್ಗಿಸಿಕೊಂಡು, ಊಟ ಮಾಡಿ ಮುಗಿಸಿದನು. ಕೈತೊಳೆದುಕೊಳ್ಳಲು ಬಾವಿಯ ಹತ್ತಿರ ಹೋಗಲು ಅಲ್ಲೊಂದು ವಿಸ್ಮಯಕರವಾದ ದೃಶ್ಯವು ಕುಮುದನ ಕಣ್ಣಿಗೆಬಿತ್ತು. ಅದೇನು!

ಬಾವಿಯ ರಾಟೆಯಮೇಲೆ ಅರ್ಧವೆಳೆದು ಬಿಟ್ಟಿದ್ದ ಹಗ್ಗ, ಬಾವಿಯಲ್ಲಿ ನೇತಾಡುತ್ತಿದ್ದ ತುಂಬಿದ ಬಕೇಟು ಆತನಿಗೆ ಕಾಣಿಸಿತು.

"ನೀರು ಸೇದುತ್ತಿರುವಾಗ ನಮ್ಮ ಯಜಮಾನರು ಕೂಗಲು, ಹಗ್ಗಹಾಗೆಯೇ ಬಿಟ್ಟು ಹೋದೆ" ಎಂದು ಸುಧರ್ಮನ ಹೆಂಡತಿ ನಗುತ್ತಾ ಕುಮುದನಿಗೆ ಹೇಳಿದಳು. ಕುಮುದನು ಆಶ್ಚರ್ಯದಿಂದ ದಂಗಾಗಿನಿಂತನು.

ತನಗಿಂತಲೂ ಅಧಿಕ ತಪೋಶಕ್ತಿ ಇರುವಾತನಿಲ್ಲವೆಂದೂ, ಸಂಸಾರಕೂಪದಲ್ಲಿ ಬಿದ್ದಿರುವವರೆಲ್ಲಾ ಅಲ್ಪರೆಂದೂ ಭಾವಿಸಿದ್ದ ಕುಮುದನಿಗೆ ಗರ್ವಭಂಗವಾಯಿತು. ಆಗ ಆತನು ಕೈಜೋಡಿಸಿ, ಸುಧರ್ಮಗೆ ನಮುಸ್ಕಾರ ಮಾಡಿ "ಸುಧರ್ಮಾ, ನೀವು ಮಹನೀಯರು ಸರ್ವಸಂಗಪರಿತ್ಯಾಗಮಾಡಿದವರಿಗೂ ಮುಕ್ತಿಯಿರುವುದೇ?" ಎಂದು ಕೇಳಿದನು.

ಅದಕ್ಕೆ ಸುಧರ್ಮನು "ಕುಮುದಾ, ನಿರ್ಮಲವಾದ ಮನಸ್ಸಿನಿಂದ ದೇವರನ್ನು ಎಲ್ಲಿಂದ ಪ್ರಾರ್ಥಿಸಿದರೂ ಮುಕ್ತಿ ಲಭ್ಯವಾಗುವುದು. ಅಡವಿಯಲ್ಲಿ ಕಂದಮೂಲಾದಿಗಳನ್ನು ತಿನ್ನುತ್ತಾ, ಮೂಗು ಮುಚ್ಚಿ ಕುಳಿತರೂ ನಿರ್ಮಲ ಮನಸ್ಸಿಲ್ಲದ ಅಹಂಕಾರಿಗೆ ಮೋಕ್ಷ ದ್ವಾರವು ತೆಗೆಯುವುದಿಲ್ಲ" ಎಂದನು.

ಈರೀತಿ ಕುಮುದನಿಗೆ ಸಂಶಯನಿವೃತ್ತಿಯಾದುದು ಮಾತ್ರವೇ ಅಲ್ಲದೆ, ಆತನಲ್ಲಿದ್ದ ಅಹಂಕಾರ, ಅಹಂಭಾವಗಳು ಮಾಯವಾದವು. ಅಂದಿನಿಂದ ನಿರ್ಮಲಚಿತ್ತದಿಂದ ಭಗವಂತನನ್ನು ಧ್ಯಾನಿಸಿ, ಮುಕ್ತಿಯನ್ನು ಪಡೆದ.






# 8

[ಅಡವಿಯಲ್ಲಿ ದಾರಿ ತಿಳಿಯದೆ ಹುಡುಕುತ್ತ ಹೋಗುತ್ತಿರುವ ಸಮರಸೇನನಿಗೂ ಸೈನಿಕರಿಗೂ ಪ್ರಾಣಾಪಾಯದ ಪರಿಸ್ಥಿತಿಯಲ್ಲಿದ್ದ ಒಬ್ಬ ಹೊಸ ಸೈನಿಕನು ಕಾಣಿಸಿದನಲ್ಲವೆ? ಅವನಿಂದ ಕುಂಡಲಿನೀ ದ್ವೀಪದಿಂದ ಬಂದ ಕುಂಭಾಂಡನ ರಾಜದ್ರೋಹವನ್ನು ಸಮರಸೇನಾದಿಗಳು ಅರಿತುಕೊಂಡರು. ಅವನನ್ನು ಹೇಗೆ ಹತಮಾಡುವುದೆಂದು ಸಮರಸೇನನು ಯೋಚಿಸುತ್ತಿದ್ದಾಗ ಅಕಸ್ಮಾತ್ತಾಗಿ ಚತುರ್ನೇತ್ರನು ಅಲ್ಲಿಗೆ ಬಂದುಬಿಟ್ಟ. ತರುವಾಯ—]

**ಚ**ತುರ್ನೇತ್ರನು ಹಠಾತ್ತನೆ ತನ್ನ ಮುಂದೆ ಕಾಣಿಸಿಕೊಳ್ಳಲು ಸಮರಸೇನನಿಗೆ ಮಾತ್ರವೇ ಅಲ್ಲದೆ ಆತನ ಸೈನಿಕರಿಗೂ ಗಾಬರಿಯಾಯಿತು. ಆ ಹೊಕ ಸೈನಿಕನಂತೂ ಮತ್ತಷ್ಟು ಗಾಬರಿಗೊಳಗಾದನು. ಚತುರ್ನೇತ್ರನ ಗೂಢಚಾರರಾದ ಕರಿಗೂಬೆ, ನರವಾನರ ಆ ಸಮೀಪದಲ್ಲೇ ಇದ್ದು ಈ ಚೋದ್ಯವನ್ನು ನೋಡುತ್ತಿವೆ.

"ಪರರಿಗೆ ಹಾನಿ ಎಸಗುವುದು ನನ್ನ ಕೆಲಸವಲ್ಲ. ಭಯಪಡಬೇಡಿ. ಆ ಏಕಾಕ್ಷಿ ಹೊರತು ಈ ಲೋಕದಲ್ಲಿ ನನಗೆ ಬೇರೆ ಶತ್ರುಗಳಿಲ್ಲ. ಸರಿ, ಈ ಹೊಸಬನಾರು?" ಎಂದ ಚತುರ್ನೇತ್ರ, ಅಪಾಯದಿಂದ ರಕ್ಷಿಸಲ್ಪಟ್ಟ ಸೈನಿಕನ ಕಡೆ ಬೆರಳುಮಾಡಿ.

"ನನ್ನ ಹೆಸರು ಧನಪಾಲ. ಆಪತ್ತಿನಲ್ಲಿ ಸಿಲುಕಿರುವಾಗ ಇವರು ನನ್ನನ್ನು ಕಾಪಾಡಿದರು" ಎಂದ ಆ ಹೊಸ ಸೈನಿಕನು ಭಯಪಡುತ್ತಾ. ಆ ಮಾತಿಗೆ ಚತುರ್ನೇತ್ರನು ನಗುತ್ತಾ "ನೀವೆಲ್ಲರೂ ಮತ್ತೊಂದು ಆಪತ್ತಿನಲ್ಲಿ ಸಿಲುಕಿಕೊಳ್ಳುವಿರಿ. ಹಿಂದೆ ನಿಮಗೆ ಹಾನಿಯನ್ನುಂಟು ಮಾಡುವವನು ಏಕಾಕ್ಷಿ






ವನ್ನು ಸೂಚಿಸಲಾರೆಯಾ" ಎಂದು ಕೇಳಿದ. ಚತುರ್ನೇತ್ರನು ಸ್ವಲ್ಪ ಹೊತ್ತು ಆಲೋಚಿಸಿ ತಲೆಬಗ್ಗಿಸಿಕೊಂಡು ಈರೀತಿ ಹೇಳಿದ:

"ಈ ದ್ವೀಪದಲ್ಲಿ ಇಷ್ಟೊಂದು ರಗಳೆಗೂ ಕಾರಣವೇನೆಂದರೆ ಪೂರ್ವತೀರದಲ್ಲಿ ಸಮುದ್ರದಲ್ಲಿ ಅರ್ಧ ಮುಳುಗಿರುವ ಒಂದು ಹಡಗು. ಅದರ ತುಂಬಾ ಧನರಾಶಿಯಿದೆ ಎಂಬ ವಿಷಯ ಎಲ್ಲರಿಗೂ ತೀಳಿದಿದೆ. ಧನದಿಂದ ಆಗದ ಕೆಲಸ ಯಾವುದೂ ಇಲ್ಲವೆಂದು ಅನೇಕರು ನಂಬಿರುತ್ತಾರೆ. ಏಕಾಕ್ಷಿಮಾಂತ್ರಿಕನಿಗೆ ಆ ಧನಬೇಕು. ನನಗೆ ಆ ಹಡಗನ್ನು ಕಾವಲು ಕಾಯುತ್ತಿರುವ ಆ ನಾಗಕನ್ಯೆ ಬೇಕು. ನಿನಗೇನು ಬೇಕೋ ಹೇಳಿದರೆ ನನ್ನ ಕೈಲಾದ ಸಹಾಯ ಮಾಡುವೆನು." ಅಷ್ಟರಲ್ಲಿ ಪ್ರಾಣಾಪಾಯದಿಂದ ರಕ್ಷಿಸಲ್ಪಟ್ಟಿದ್ದ ಧನಪಾಲನು ನಡುಗುತ್ತಾ ಕಿಟಾರನೆ ಕಿರಿಚಿಕೊಂಡ. ಸಮರಸೇನನು, ಉಳಿದ ಸೈನಿಕರೂ ಅತ್ತಕಡೆ ತಿರುಗಿ ನೋಡಿ "ಏನಾಯಿತು" ಎಂದು ಕಾತುರದಿಂದ ಕೇಳಿದರು.

ಧನಪಾಲನು ದೂರದಲ್ಲಿದ್ದ ಪೊದೆಗಳಕಡೆ ಬೆರಳುತೋರಿ "ಅದೋ ನೋಡಿ, ಅವರು ಮತ್ತೆ ಬಂದರು. ನನ್ನನ್ನು ಅವರೇ ಮರಕ್ಕೆ ಕಟ್ಟಿ ಬಂಧಿಸಿದವರು" ಎಂದನು. ಆತನ ಧ್ವನಿ ಕಂಪಿಸುತಿತ್ತು.

ಅತ್ತಕಡೆ ನೋಡಲು ಸಮರಸೇನನಿಗೂ, ಆತನ ಸೈನಿಕರಿಗೂ ಈರ್ವರು ಕಾಡುಜನರು ಕಾಣಿಸಿದರು. ಕೂಡಲೇ ಸಮರಸೇನನು ಬಾಣವನ್ನು ಹೆದೆಗೇರಿಸಿದನು. ಆದರೆ ಚತು

ಮಾಂತ್ರಿಕನು ಮಾತ್ರವಿದ್ದ. ಆದರೀಗ ಈ ದ್ವೀಪಕ್ಕೆ ದಕ್ಷಿಣದಿಕ್ಕಿನಲ್ಲಿರುವ ಪರ್ವತವಾಚೆ ಕಡೆಯಿಂದ ನಿಮ್ಮಂತಹ ಮಾನವರಿಂದಲೇ ಪ್ರಾಣಾಪಾಯ ವುಂಟಾಗುವುದು" ಎಂದ.

ಆ ಸಮಯದಲ್ಲಿ ಪೊದೆಯ ಹಿಂದೆ ಅವಿತುಕೊಂಡಿದ್ದ ಇಬ್ಬರು ಕಾಡುಜನರು ಇವರ ಕಡೆಯೇ ನೋಡುತ್ತಿದ್ದರು. ಆದರೆ ಆ ವಿಷಯ ಸಮರಸೇನನಿಗಾಗಲೀ, ಆತನ ಸೈನಿಕರಿಗಾಗಲೀ ತಿಳಿಯದು. ಸಮರಸೇನನು ತುಸ ಧೈರ್ಯಕೊಂದಿ "ಎಲೈ ಚತುರ್ನೇತ್ರನೇ, ನೀನು ಮಾಂತ್ರಿಕನಾದರೂ ಸಹ ತುಂಬಾ ಸಭ್ಯನಂತೆ ಕಾಣುವೆ. ನೀನು ಹೇಳಿದಂತೆ ನಮಗೆ ಪ್ರಾಣಾಪಾಯವುಂಟಾಗುವುದಾದರೆ ಅದರಿಂದ ನಾವು ತಪ್ಪಿಸಿಕೊಳ್ಳುವ ಮಾರ್ಗ

ನೇತ್ರನು ಕೂಡಲೇ ಅವನನ್ನು ತಡೆದು:
"ಎಲೈ ಸೈನ್ಯಾಧಿಪತಿಯೇ, ನಿನ್ನ ಬಾಣ
ದೇಟಿಗೆ ಅವರು ಬಲಿಯಾಗಲಾರರು. ಆಕಾಶ
ದಲ್ಲಿ ಹಾರುವ ಪಕ್ಷಿಯನ್ನಾಗಲೀ, ಓಡು
ತ್ತಿರುವ ಚಿರತೆಯನ್ನಾಲೀ ನೀನು ಕೊಲ್ಲ
ಬಹುದು. ಆದರೆ ಇವರುಮಾತ್ರ ಶರವೇಗ
ವನ್ನೂ ಮೀರಿಸುವಂತೆ ಓಡಬಲ್ಲರು. ಅವರ
ವಿಷಯ ನಾನು ನೋಡಿಕೊಳ್ಳುತ್ತೇನೆ. ನಿನಗೆ
ತೊಂದರೆ ಬೇಡ" ಎಂದ.

ಹಾಗೆ ಹೇಳಿದ ತರುವಾಯ "ನರವಾನರ,
ಉಲೂಕಾ" ಎಂದು ತನ್ನ ಬೇಹುಗಾರರನ್ನು
ಕೂಗಿದ ಚತುರ್ನೇತ್ರ. ಹತ್ತಿರದಲ್ಲೇ ಇದ್ದ
ಗೂಬೆ ಮತ್ತು ನರವಾನರರು ತಮ್ಮ ಯಜ
ಮಾನನ ಹತ್ತಿರಕ್ಕೆ ಬಂದವು.

"ನರವಾನರ, ನೀನು ಹೋಗಿ ಅಲ್ಲಿ ಓಡು
ತ್ತಿರುವ ಕಾಡು ಜನರನ್ನು ಕೊಂದು ಬಿಡು.
ಉಲೂಕಾ, ನೀನು ಈ ಸುತ್ತಮುತ್ತ ತಿರು
ಗಾಡಿ ಸುದ್ದಿ ಸಮಾಚಾರವನ್ನು ಸಂಗ್ರಹಿಸಿ
ಕೊಂಡು ಬಾ" ಎಂದು ಆಜ್ಞಾಪಿಸಿದ.

ಕೂಡಲೇ ನರವಾನರವು ವೇಗವಾಗಿ
ಓಡಿತು. ತುಸ ಹೊತ್ತಿಗೆಲ್ಲಾ ಇಣಕಿ ನೋಡಿ
ಓಡಿ ಹೋಗುತ್ತಿದ್ದ ಕಾಡು ಜನರಲ್ಲಿ ಒಬ್ಬಾತ
ನನ್ನು ತನ್ನ ಬಲವಾದ ಕೈಗಳನಡುವೆ ಬಿಗಿ
ಯಾಗಿ ಸಿಕ್ಕಿಸಿಕೊಂಡಿತು.

ಅವನು ಪ್ರಾಣ ಭೀತಿಯಿಂದ ಅರಣ್ಯ
ವೆಲ್ಲಾ ಪ್ರತಿಧ್ವನಿಸುವಂತೆ ಅರಚುತ್ತಿದ್ದ. ನರ
ವಾನರವು ಅವನನ್ನು ಎರಡು ಮೂರಾವರ್ತಿ





ಹೋಗಬಹುದು. ನನ್ನ ಹಿಂದೆ ಬನ್ನಿ. ಕೊಳವನ್ನು ತೋರಿಸುನೆನು" ಎಂದ.

ಎಲ್ಲರೂ ಆತನೊಂದಿಗೆ ಒಂದು ಕೊಳದ ಹತ್ತಿರಕ್ಕೆ ಹೋದರು. ಆ ಕೊಳದ ತುಂಬಾ ಕ್ರೂರಜಂತುಗಳು ಈಜಾಡುತ್ತಿದ್ದವು. ಧನಪಾಲನು ಅತ್ಯಂತ ಜಾಗರೂಕತೆಯಿಂದ ದಡದಲ್ಲೇ ನಿಂತುಕೊಂಡು ತನ್ನ ಬಾಯಾರಿಕೆಯನ್ನು ತೀರಿಸಿಕೊಂಡನು.

ಸುಮರಸೇನನು ಕುಂಭಾಂಡನ ವಿಷಯವನ್ನು ಕುರಿತು ಯೋಚಿಸುತ್ತಿದ್ದನು. ಆ ದ್ವೀಪಕ್ಕೆ ದಕ್ಷಿಣ ಭಾಗದಲ್ಲಿರುವ ಬೆಟ್ಟಗಳಿಂದಾಚೆಯಿಂದ ಯಾರು ಬಂದು ತಮ್ಮ ಮೇಲೆ ಬೀಳಲು ಸಾಧ್ಯ ಎಂದು ಆತನು ಆಲೋಚಿಸಹತ್ತಿದನು. ಆದರೆ ಕ್ಷಣಮಾತ್ರದಲ್ಲಿ ಅವರು ಯಾರಿರಬಹುದೆಂಬ ವಿಷಯವನ್ನು ಗ್ರಹಿಸಿಬಿಟ್ಟನು. 'ಅವನು ಕುಂಭಾಂಡನೇ ಆಗಿರಬೇಕು, ಕಾಡುಜನರನ್ನು ಸಂಗಡ ಕಟ್ಟಿಕೊಂಡು ಧನರಾಶಿಯಿಂದ ತುಂಬಿರುವ ಹಡಗಿನ ಹತ್ತಿರಕ್ಕೆ ಹೊರಡುತ್ತಿರಬಹುದೆಂದು ಊಹಿಸಿದನು.

"ಎಲೈ ಚತುರ್ನೇತ್ರನೇ, ಒಂದು ವಿಚಾರಮಾತ್ರ ನನಗೆ ಸಂಶಯವುಂಟಾಗಿದೆ. ಆ ಧನರಾಶಿಯಿಂದ ತುಂಬಿರುವ ಹಡಗನ್ನು ಒಬ್ಬ ನಾಗಕನ್ಯೆ ಕಾವಲು ಕಾಯುತ್ತಿರುವುದು ನಿಜವೇ?" ಎಂದು ಕೇಳಿದ ಸಮರಸೇನ.

"ಇದರಲ್ಲಿ ಸಂದೇಹವೇ ಇಲ್ಲ. ಬೇಕಾದರೆ ನನ್ನೊಂದಿಗೆ ಬನ್ನಿ. ತುಸ ನಡೆದರೆ ಆ

ಮೇಲಕ್ಕೆ ಬೀಸಿ ಎಸೆಯಿತು. ಅವನು ದೂರದಲ್ಲಿದ್ದ ಬಂಡೆಯಮೇಲೆ ಹೋಗಿಬಿದ್ದ.

ಗೂಬೆ ಇನ್ನೊಬ್ಬ ಅಡವಿ ಮನುಷ್ಯನ ಮೇಲೆ ಹಾರಿತು. ಅದು ತನ್ನ ಕಾಲುಗಳಿಂದ, ಕೊಕ್ಕಿನಿಂದ ಅವನ ತಲೆಯನ್ನು ಕುಕ್ಕುತ್ತಾ, ಕೂಗಾಡುತಿತ್ತು. ವಿಚಿತ್ರವಾದ ಈ ಹೋರಾಟವನ್ನು ನೋಡುತ್ತಿದ್ದ ಸಮರಸೇನ ಮತ್ತು ಆತನ ಸೈನಿಕರಿಗೆ ಆನಂದ ತಡೆಯದಾಯಿತು.

ಅಷ್ಟರಲ್ಲಿ ಧನಪಾಲನು ತಲೆಯಾಡಿಸುತ್ತಾ "ನನಗೆ ಬಾಯಾರಿಕೆಯಾಗುತ್ತಿದೆ. ಇಲ್ಲಿ ಎಲ್ಲಿಯಾದರೂ ನೀರು ಸಿಗುವುದೇ?" ಎಂದು ಒಬ್ಬ ಸೈನಿಕನನ್ನು ಕೇಳಿದ. ಅವನ ಮಾತುಗಳನ್ನು ಆಲಿಸಿದ ಚತುರ್ನೇತ್ರನು "ದಾಹ ಅಡಗಿಸಿಕೊಳ್ಳಲು ಹೋದರೆ ಪ್ರಾಣವೇ



ಹಡಗನ್ನೂ, ನಾಗಕನ್ಯೆಯನ್ನೂ ನಿಮಗೆ ತೋರಿಸುವೆನು" ಎಂದ ಚತುರ್ನೇತ್ರ.

ಚತುರ್ನೇತ್ರ ಮುಂದೆ ನಡೆದ. ಆತನ ಹಿಂದೆ ಸಮರಸೇನನೂ, ಸೈನಿಕರೂ ನಡೆದರು. ಸ್ವಲ್ಪ ಹೊತ್ತಿಗೆಲ್ಲಾ ಅವರು ಒಂದು ಎತ್ತರವಾದ ಪ್ರದೇಶವನ್ನು ಸೇರಿದರು. ಅದೊಂದು ಬೆಟ್ಟದ ತುದಿಯಂತೆ ಕಾಣಿಸಿತು. ಅಲ್ಲಿಂದ ನೋಡಿದರೆ ಪ್ರಶಾಂತವಾದ ಸಮುದ್ರವು ವಿಸ್ತಾರವಾಗಿ ಕಾಣಬರುತ್ತಿತ್ತು.

"ಅದೋ ಅಲ್ಲಿ ನೋಡಿ ಹಡಗು ಕಾಣಿಸುತ್ತಿಲ್ಲವೇ!" ಎಂದು ಚತುರ್ನೇತ್ರನು ಸಮರಸೇನನನ್ನು ಕೇಳಿದ. ಸುಮರಸೇನನೂ ಆತನ ಸೈನಿಕರೂ ಅತ್ತ ಕಡೆ ನೋಡಿದರು. ಅವರಿಗೆ ಸ್ಪಷ್ಟವಾಗಿ ಹಡಗು ಕಾಣಬಂತು. ಅದು ಸಮುದ್ರದಲ್ಲಿ ಅರ್ಧ ಮುಳುಗಿರುವಂತೆ ತೋರುತ್ತಿದೆ. ಹರಿದುಹೋದ ತೆರೆಚಾಪೆ ಒಂದು ಪಕ್ಕಕ್ಕೆ ಜೋತುಕೊಂಡು ಅಲೆಗಳೊಂದಿಗೆ ಅದೂಸಹ ತೇಲಾಡುತ್ತಿದೆ. ಆದರೆ ಸಮರಸೇನ ಮುಂತಾದವರಿಗೆ ನಾಗಕನ್ಯೆಮಾತ್ರ ಕಾಣಿಸಲಿಲ್ಲ.

"ನಾಗಕನ್ಯೆ ಕಾಣಿಸುತ್ತಿಲ್ಲವಲ್ಲಾ?" ಎಂದು ಆಶ್ಚರ್ಯಚಕಿತನಾಗಿ ಸಮರಸೇನ ಕೇಳಿದ. ಆ ಪ್ರಶ್ನೆಗೆ ಚತುರ್ನೇತ್ರನು ಕಿರುನಗೆ ಬೀರಿ "ಸಮರಸೇನನೇ, ಆ ನಾಗಕನ್ಯೆ ನಿಮ್ಮ ಕಣ್ಣಿಗೆ ಗೋಚರಿಸಿದರೆ ಇನ್ನು ನನ್ನ ಮಂತ್ರತಂತ್ರಗಳನ್ನು ತಿಪ್ಪೆಗೆಸೆಯಬೇಕಾಗುತ್ತದೆ. ಆ ನಾಗಕನ್ಯೆಯನ್ನು ನನ್ನ ಮತ್ತು ಏಕಾಕ್ಷಿಯ



ಹೊರತು ಮತ್ತೆ ಯಾರೂ ನೋಡಲಾರರು. ಏಕಾಕ್ಷಿ ಆಕೆಯನ್ನು ಸ್ನೇಹಿಸುತ್ತಿದ್ದಾನೆ. ನಾನು ಆಕೆಯನ್ನು ಪ್ರೇಮಿಸಿದ್ದೇನೆ."

ಬೇರೇನು ಕೇಳಲೂ ಸಮರಸೇನನಿಗೆ ಮನಸ್ಸು ಬರಲಿಲ್ಲ. ಮೊದಲು ಹಣದ ವಿಷಯ ಕೇಳಿದಾಗ ಅದನ್ನು ವಶಪಡಿಸಿಕೊಂಡು, ಕುಂಡಲಿನೀ ದ್ವೀಪವನ್ನು ಸೇರಿಕೊಳ್ಳಬೇಕೆಂದು ಎಣಿಸಿದ್ದ. ಆದರೆ ಅದು ತನ್ನಿಂದ ಸಾಧ್ಯವಾಗುವ ಕಾರ್ಯವಲ್ಲವೆಂದು ಮನದಟ್ಟವಾಯಿತು. ಈಗ ರಾಜದ್ರೋಹಿಯಾದ ಕುಂಭಾಂಡನೂ ಸಹ ಅದಕ್ಕಾಗಿ ಪ್ರಯತ್ನಿಸುತ್ತಿರುವುದು ತಿಳಿದು ಬಂತು. ಅಷ್ಟೇ ಅಲ್ಲದೆ ಏಕಾಕ್ಷಿ ಮಾಂತ್ರಿಕನ ಕಾಟ ಬೇರೆ. ಇವುಗಳೆಲ್ಲಕ್ಕಿಂತಲೂ ಯಾವ ಮಂತ್ರಶಕ್ತಿಯ ಸಹಾ












ಯವೂ ಇಲ್ಲದೆ ಆ ನಾಗಕನ್ಯೆಯು ಕಾವಲಿನಿಂದ ತಪ್ಪಿಸಿಕೋಡು ಆ ಹಡಗನ್ನು ಸೇರುವುದು ದುಸ್ತರ. ಸಮರಸೇನನನು ತೀವ್ರಾಲೋಚನೆಯಲ್ಲಿರುವುದನ್ನು ಗ್ರಹಿಸಿ ಚತುರ್ನೇತ್ರನು ಪಕಪಕನೆ ನಕ್ಕುಬಿಟ್ಟನು.

"ಸಮರಸೇನನೇ, ನಿನ್ನ ಮನಸ್ಸಿನಲ್ಲಿ ಆಗುತ್ತಿರುವ ಮಲ್ಲಯುದ್ಧವನ್ನು ನಾನು ಅರಿತಿದ್ದೇನೆ" ಎಂದು ಹೇಳಿ ಚತುರ್ನೇತ್ರನು ಹೀಗೆಂದು ಮುಂದುವರಿಸಿದ: "ನನಗೂ ಈ ಕ್ಷಣವೇ ಒಂದು ಆಲೋಚನೆ ಹೊಳೆಯಿತು. ನೀನು ಆ ಹಡಗಿನಲ್ಲಿರುವ ಧನರಾಶಿಯ ಮೇಲೆ ಕಣ್ಣಿಟ್ಟಿರುವುದನ್ನು ನಾನು ಆಗಲೇ ಗ್ರಹಿಸಿದೆ. ಆ ಧನದ ವಿಷಯದಲ್ಲಿ ಮಾತ್ರ ನಾನು ನಿನ್ನೊಂದಿಗೆ ಪೈಪೋಟಿ ಮಾಡುವುದಿಲ್ಲ. ನಿನಗೆ ಪ್ರತಿ ಪಕ್ಷ ಆ ಏಕಾಕ್ಷಿ! ಆದುದರಿಂದ ನಾವಿಬ್ಬರೂ ಒಟ್ಟುಗೂಡಿ ಏನಾದರೂ ಸಾಧಿಸಲು ಸಾಧ್ಯವಾಗದೇ?"

ಸಮರಸೇನನಿಗೆ ಎಲ್ಲಿಲ್ಲದ ಧೈರ್ಯ ಬಂತು. 'ರಾಜದ್ರೋಹಿಯಾದ ಕುಂಭಾಂಡನನ್ನು ಸದೆಬಡೆಯಬಹುದು. ಸಾಧ್ಯವಾದರೆ ಆ ನಾವೆಯಲ್ಲಿರುವ ಧನರಾಶಿಯನ್ನು ಸಹ ಸಂಪಾದಿಸಬಹುದು. ಆದರೆ ಧನರಾಶಿಯೊಂದಿಗೆ ಏಕೆ ಆ ಹಡಗು ಸಮುದ್ರದಲ್ಲಿ ಹಾಗೆ ನಿಂತುಬಿಟ್ಟಿದೆ?' ಎಂದು ಯೋಚಿಸ ಹತ್ತಿದನು. ಎಷ್ಟು ಯೋಚಿಸಿದರೂ ಬಗೆ ಹರಿಯಲಿಲ್ಲ.

"ಎಲೈ, ಚತುರ್ನೇತ್ರನೇ, ಮಾಂತ್ರಿಕರೆಂದರೆ ಸಹಜವಾಗಿ ಮಾನವರಿಗೆ ಭಯವಿದ್ದೇಯಿರುತ್ತದೆ. ಆದರೆ ಈ ದ್ವೀಪದಲ್ಲಿರುವ ನಿನಗೂ ಏಕಾಕ್ಷಿಗೂ ಬಹಳ ವ್ಯತ್ಯಾಸವಿದೆ. ನೀನು ಸಾಧು ಸ್ವಭಾವದವನಂತೆ ಕಾಣಿಸುವೆ. ನಾನು ಮಾಡಬಹುದಾದ ಸಹಾಯವೇನಾದರೂ ಇದ್ದರೆ ಅಗತ್ಯವಾಗಿ ಮಾಡುವೆನು. ಆದರೆ ಒಂದು ವಿಷಯ. ನನಗೆ ಈ ಧನರಾಶಿಯಿಂದ ತುಂಬಿರುವ ಹಡಗಿನ ರಹಸ್ಯ ತಿಳಿದುಕೊಳ್ಳಬೇಕೆಂಬ ಕುತೂಹಲ ಅಧಿಕವಾಗಿದೆ" ಎಂದ ಸಮರಸೇನ.

ಅದಕ್ಕೆ ಚತುರ್ನೇತ್ರನು ತಕ್ಷಣ ಯಾವ ಉತ್ತರವನ್ನೂ ಕೊಡಲಿಲ್ಲ. ಸ್ವಲ್ಪ ಹೊತ್ತು ಬಿಟ್ಟುಕೊಂಡು ಹೀಗೆಂದ:

"ಆ ಹಡಗು, ಧನರಾಶಿ, ನಾಗಕನ್ಯೆಯ ಕಥೆ ಬಹಳ ದೊಡ್ಡದು. ಅದೆಲ್ಲಾ ಕೇಳಲು



ನಿನಗೆ ಮನಸ್ಸು ಇರಲಾರದು. ಆದುದರಿಂದ ಸೂಕ್ಷ್ಮವಾಗಿ ಕೆಲವೇ ಮಾತುಗಳಲ್ಲಿ ಹೇಳಿ ಮುಗಿಸುವೆನು ಲಾಲಿಸು :

"ಬಹುಶಃ ನೀವೆಲ್ಲರೂ ಶಮನದ್ವೀಪದ ವಿಷಯ ಕೇಳಿರಲಾರಿರಿ. ಒಂದು ವೇಳೆ ಕೇಳಿದ್ದರೂ ಸಹ ನೀವು ಕರೆಯುವ ಹೆಸರು ಬೇರೊಂದು ಇರಲೂಬಹುದು. ಶಮನ ದ್ವೀಪವನ್ನು ಶಾಕ್ತೇಯನೆಂಬ ರಾಜನು ಪಾಲಿಸುತ್ತಿದ್ದನು. ಶಾಕ್ತೇಯನೆಂದರೆ ನೀವು ಆಗಲೇ ಊಹಿಸಿರಬಹುದು...ಆತನು ಕಾಳಿಕಾದೇವಿಯ ಭಕ್ತ. ಮಂತ್ರ ತಂತ್ರ ವಿದ್ಯೆಯಲ್ಲಿ ಆತನನ್ನು ಮಿಾರಿಸಿದವರಿಲ್ಲ.

"ಒಂದುಸಾರಿ ನವರಾತ್ರಿ ಉತ್ಸವವು ನಡೆಯುತ್ತಿದೆ. ಶಾಕ್ತೇಯನು ಸ್ವಯವಾಗಿ ಪೂಜೆಮಾಡುತ್ತಿದ್ದಾನೆ.

ಇದ್ದಕ್ಕಿದ್ದಂತೆಯೇ ಜನರ ಕೋಲಾಹಲದ ಮಧ್ಯೆ ಕಾಳಿಕಾದೇವಿ ಸ್ಪಷ್ಟವಾದ ದನಿಯಿಂದ ಹೀಗೆಂದು ನುಡಿದಳು :

'ಭಕ್ತರೇ, ನಿಮ್ಮ ಭಕ್ತಿಗೆ ಮೆಚ್ಚಿದೆನು. ಆದರೆ ನಿಮ್ಮ ಒಣಪೂಜೆಗಳಿಂದ ನನಗೆ ತೃಪ್ತಿಯುಂಟಾಗದು. ನನಗಾಗಿ ಒಂದು ಅದ್ಭುತ ಮತ್ತು ಸುಂದರವಾದ ಗುಡಿ ಕಟ್ಟಿಸಿ ಕೊಡಿ' ಎಂದು ಹೂಂಕರಿಸಿದಳು.

'ತಾಯೇ, ನಿನಗಾಗಿ ಭಾರಿ ದೇವಾಲಯ ವನ್ನು ನಿರ್ಮಿಸುವೆನು. ಮುಗಿಲು ಮುಟ್ಟುವ ಗೋಪುರವನ್ನು ಕಟ್ಟಿಸುವೆನು' ಎಂದು ಮೊಣಕಾಲೂರಿ ನುಡಿದ ಶಾಕ್ತೇಯ.

ಆದರೆ ಕಾಳಿಕಾದೇವಿಗೆ ಸಂತೃಪ್ತಿ ಯುಂಟಾದಂತೆ ತೋರಲಿಲ್ಲ. ಆಕೆ ಹೂಂ ಕರಿಸಿ ಮತ್ತೆ ಹೀಗೆಂದಳು :

'ನನ್ನ ಗುಡಿಗೋಪುರಗಳನ್ನು ಮಾಮೂಲು ಕಲ್ಲು, ಮಣ್ಣುಗಳಿಂದ ನಿರ್ಮಿಸಿದರೆ ನನಗೆ ತೃಪ್ತಿಯಾಗದು. ಬೆಳ್ಳಿ ಬಂಗಾರಗಳಿಂದ ಕಟ್ಟಿಸು. ಆಗಲೇ ನನಗೆ ಸಂತೃಪ್ತಿ'.

"ಶಾಕ್ತೇಯನು ಗಡಗಡ ನಡುಗಿದ. ಆದರೆ ಕಾಳಿಕಾದೇವಿಯ ಆಜ್ಞೆಯನ್ನು ಶಿರಸಾ ವಹಿಸಲೇ ಬೇಕಲ್ಲವೇ? ಆದರೆ ಭಾರಿ ಗುಡಿ ಗೋಪುರಗಳಿಗೆ ಸರಿಹೋಗುವಷ್ಟು ಬೆಳ್ಳಿ ಬಂಗಾರವನ್ನು ಸಂಪಾದಿಸುವುದು ಹೇಗೇ?

[ಇನ್ನೂ ಇದೆ]






ಒಂದು ಅಡವಿಪ್ರಾಂತ್ಯದಲಿದ್ದ ಸಣ್ಣ ಹಳ್ಳಿಯಲ್ಲಿ ಒಬ್ಬ ರೈತಯುವಕನಿದ್ದ. ಅವನು ಚಿಕ್ಕಂದಿನಿಂದಲೂ ಬೇಸಾಯದಲ್ಲಿ ನಿರತನಾಗಿದ್ದ. ಸ್ವಲ್ಪ ಕಾಲದನಂತರ ವ್ಯವಸಾಯವೆಂದರೆ ಜಿಹಾಸೆಯುಂಟಾಯಿತು ಆ ಯುವಕನಿಗೆ. ಬಿಲ್ಲುಬಾಣ ಕೈಯಲ್ಲಿ ಹಿಡಿದು ಅಡವಿ ಪ್ರಾಣಿಯೊಂದನ್ನು ಕೊಂದು ಹೊಟ್ಟೆ ಹೊರೆಯಬಹುದಲ್ಲವೇ ಎಂಬ ದುರಾಲೋಚನೆ ತಲೆಹಾಕಿತು.

ಅಂದಿನಿಂದ ಬಾಣಬತ್ತಳಿಕೆಗಳನ್ನು ಧರಿಸಿ ಕಾಡಿನಲ್ಲಿ ಕಂಡ ಪ್ರಾಣಿ ಪಕ್ಷಿಗಳನ್ನು ಕೊಲ್ಲಲು ಮೊದಲುಮಾಡಿದ. ಜಿಂಕೆ ನವಿಲು ಮುಂತಾದ ಅಂದವಾದ ಸಾಧುಪ್ರಾಣಿಗಳೂ ಸಹ ಅವನ ಬಾಣದ ಹೊಡೆತಕ್ಕೆ ಗುರಿಯಾದವು. ಅವುಗಳ ಕಾಟ ಇವನಿಗೆ ಆಟ.

ಒಂದು ದಿವಸ ಹೀಗೆ ಬೇಟೆಯಾಡುತ್ತಿರುವಾಗ ಬಿರುಸಾಗಿ ಗಾಳಿ ಮಳೆ ಬಂತು. ರೈತಯುವಕನು ಆ ದಾರಿಯಲ್ಲಿದ್ದ ಸಣ್ಣದೊಂದು ಗುಡಿಸಿಲಿನಲ್ಲಿ ತಲೆ ಮರೆಸಿಕೊಂಡ.

ಕೊಂಚ ಹೊತ್ತಿಗೆ ಪಕ್ಕದಲ್ಲಿದ್ದ ಗುಡಿಸಿಲಿನಲ್ಲಿ ಏನೋ ಗಲಭೆ ಕೇಳಿತು. ಕುತೂಹಲದಿಂದ ರೈತಯುವಕನು ಎದ್ದು ಆಕಡೆ ಇಣಿಕಿ ನೋಡಿದ.

ರೈತಯುವಕನಿಗೆ ತುಂಬಾ ಆಶ್ಚರ್ಯವಾಯಿತು. ಆ ಗುಡಿಸಿಲಿನಲ್ಲಿ ಮೂವರು ವಿಚಿತ್ರ ಮನುಷ್ಯರು ಕಾಣಿಸಿದರು. ಅವರು ಕಾಲಿನ ವರೆವಿಗೂ ನೇತಾಡುವ ನೀಳವಾದ ಅಂಗಿಗಳನ್ನು ಧರಿಸಿದ್ದರು. ಟೋಪಿಗಳನ್ನಿಟ್ಟುಕೊಂಡಿದ್ದರು. ಒಲೆಯಲ್ಲಿ ಸೌದೆಗಳನ್ನು ಒಟ್ಟಿ ಬೆಂಕಿ ಉರಿಸುತ್ತಿದ್ದರು.

ಅತಿಶಯಾಶ್ಚರ್ಯದಿಂದ ಆ ಯುವಕ ಇನ್ನಷ್ಟು ಇಣಿಕಿ ನೋಡಿದ. ಆ ಮೂವರು ವ್ಯಕ್ತಿಗಳು ಮೂರು ಚಿನ್ನದ ಪಾತ್ರೆಗಳನ್ನಿಟ್ಟುಕೊಂಡು ಅಡಿಗೆಮಾಡುತ್ತಿರುವಂತೆ ತೋರಿಬಂತು. ಮೂವರಲ್ಲಿ ಒಬ್ಬನು ಅಲ್ಲಿದ್ದ ಬಾಂಡ್ಲಿಗೆ ಹಾಲು ಸುರಿಯುತ್ತಿದ್ದ. ಒಬ್ಬನು ಸೌಟು ತಿರುವುತ್ತಿದ್ದ. ಮತ್ತೊಬ್ಬ ಒಲೆ ಉರಿಸುತ್ತಿದ್ದ. ಅವರೆಲ್ಲಾ ಯಾವುದೋ ರುಚಿ

ಕೆ. ಸುನೀತಾದೇವಿ




ಕರವಾದ ಸಿಹಿ ತಿಂಡಿ ತಯಾರಿಸುತ್ತಿರಬೇಕೆಂದು ಊಹಿಸಿದ ಆ ರೈತಯುವಕ.

ಮೂವರಲ್ಲಿ ಒಬ್ಬನು ಬೆಳ್ಳಿ ಊದುಗೊಳವೆ ತೆಗೆದುಕೊಂಡ. ಅದು ಆ ಕುಳ್ಳನಿಗಿಂತಲೂ ಮೂರರಷ್ಟು ಉದ್ದವಾಗಿತ್ತು. ಆದರಿಂದ ಊದಲು ಭೂಮಿ ತತ್ತರಿಸುವಷ್ಟು ಧ್ವನಿಯಾಯಿತು.

ಅವರು ತನ್ನನ್ನು ಕಂಡಿರಲಿಕ್ಕಿಲ್ಲವೆಂದು ಭಾವಿಸಿದ್ದ ಆ ರೈತಯುವಕ. ಆದರೆ ಅವರು ಅವನ ಹೆಸರುಹಿಡಿದು ಕೂಗಿದರು. ಅವನು ಚಕಿತನಾದ. ಆಗ ಅವರು ತಮ್ಮ ಹತ್ತಿರದಲ್ಲಿದ್ದ ಮೂರು ಚಿನ್ನದ ಪಾತ್ರೆಗಳನ್ನು ತೋರಿಸಿ "ಇವುಗಳಲ್ಲಿ ನಿನಗೆ ಬೇಕಾದುದನ್ನು ಆರಿಸಿಕೋ! ನೀನು ಆರಿಸಿದ ವಸ್ತುವಿನ ಪ್ರಕಾರ ನಿನಗೆ ಫಲವುಂಟಾಗುತ್ತದೆ. ತೆಗೆದುಕೊ" ಎಂದು ನುಡಿದರು ಆ ಕುಬ್ಜರು.

ಮೂರು ಪಾತ್ರೆಗಳಲ್ಲೂ ಮೂರು ಬಗೆಯ ಪಾನೀಯಗಳಿದ್ದವು. ಹಾಲಿನಂತೆ ಬೆಳ್ಳಗೆ ಪಾನೀಯವಿದ್ದ ಪಾತ್ರೆ ಬೇಕೆಂದು ಕೇಳಿದ ಆ ಯುವಕ. 'ಸರಿ, ಎತ್ತಿಕೊಂಡು ಕುಡಿ' ಎಂದರು ಅವರು. ಅವನು ಅದನ್ನು ಕುಡಿದ.

ಆಗ ಕುಳ್ಳರು ಚಪ್ಪಾಳೆ ತಟ್ಟುತ್ತಾ, ಕೇಕೆ ಹಾಕಿಕೊಂಡು ರೈತ ಯುವಕನ ಸುತ್ತಲೂ ಕುಣಿಯತೊಡಗಿದರು. "ಭಲೆ, ಭೇಷ್! ಸರಿಯಾದ ವಸ್ತುವನ್ನು ಆರಿಸಿದೆ. ಬೆಳ್ಳಿ ತುತೂರಿಯನ್ನೇ ಆರಿಸಿದೆ" ಎಂದು ಒಬ್ಬನು ಗಟ್ಟಿಯಾಗಿ ನಗತೊಡಗಿದ.

"ಇದು ತುಂಬಾ ಮಹಿಮೆಯುಳ್ಳ ತುತೂರಿ ಇಂತಹದೇ ತಯಾರಿಸಿ ನೀನು ಹಂಚುವುದನ್ನು ಕಲಿಯಬಹುದು. ಇದನ್ನು ಊದಿದರೆ ಕಾಡಿನಲ್ಲಿ ದನಕರುಗಳು ಎಲ್ಲಿದ್ದರೂ ಊದುವವನ ಹತ್ತಿರಕ್ಕೆ ಓಡಿಕೊಂಡು ಬರುತ್ತವೆ" ಎಂದ ಎರಡನೆಯವನು.

ತರುವಾಯ ಮೂರನೆಯವನು "ಅಯ್ಯಾ, ನಿನ್ನ ಜೀವನ ಸುಖವಾಗಿರಬೇಕೆಂದರೆ ಮೂಕ ಪ್ರಾಣಿಗಳಾದ ಜಿಂಕೆ ನವಿಲುಗಳ ಬೇಟೆಯಾಡುವುದನ್ನು ಬಿಡು" ಎಂದ.

ಈರೀತಿ ತಲಾ ಒಂದೊಂದು ಮಾತುಹೇಳಿ ಆ ಮೂವರು ಕುಳ್ಳರೂ ಮಾಯವಾದರು. ಅವರು ಅಡಿಗೆ ಮಾಡಿದ ಪಾತ್ರೆಗಳೂ ಸಹ ಕಾಣದಾದುವು. ಅವರು ಬಹುಮಾನವಾಗಿ



ಕೊಟ್ಟ ಬೆಳ್ಳಿಯ ತುತೂರಿ ಅವರೆಲ್ಲಿಬಿಟ್ಟರೋ ಅಲ್ಲಿಯೇ ಉಳಿದಿತ್ತು. ಅದು ಚೊಕ್ಕ ಬೆಳ್ಳಿಯಿಂದ ತಯಾರಿಸಿದ ತುತೂರಿ.

ಹುಮ್ಮಸ್ಸಿನಿಂದ ರೈತ ಯುವಕನು ಬೇಗ ಬೇಗ ಮನೆ ಸೇರಿ ತಾನು ಸಂಪಾದಿಸಿದ ಬೆಳ್ಳಿಯ ತುತೂರಿಯನ್ನು ಪತ್ನಿಗೆ ತೋರಿಸಿದ. ತಾನು ಕಂಡ ವಿಚಿತ್ರವನ್ನೆಲ್ಲಾ ಆಕೆಗೆ ಮಣಿ ಪೋಣಿಸಿದಂತೆ ನಿರೂಪಿಸಿದ.

ಆಕೆ ಅದನ್ನು ಕೇಳಿ ಸಂತೋಷಗೊಂಡಳು. ಕಾರಣವಿಷ್ಟೇ. ತನ್ನ ಗಂಡನು ಬೇಸಾಯ ಬಿಟ್ಟು ಬೇಟೆಯಾಡುವುದು ಆಕೆಗೆ ಮೊದಲಿಂದಲೂ ಸರಿತೋರಲಿಲ್ಲ. ಈಗ ಕುಳ್ಳರ ಬೋಧನೆಯ ಪ್ರಕಾರ ಬೇಟೆಯಾಡುವುದಿಲ್ಲವೆಂದು ಶಪಥ ಮಾಡಿದ್ದರಿಂದ ಸಂತೋಷವಾಗಿತ್ತು ಆಕೆಗೆ. ಬೇಟೆಯಾಡುವುದನ್ನು ತ್ಯಜಿಸಿ, ದನ ಕಾಯುವ ಕೆಸವನ್ನು ತನ್ನ ಜೀವನೋಪಾಯವಾಗಿ ಮಾಡಿಕೊಂಡ ಆ ರೈತಯುವಕ.

ಕೆಲಕಾಲದ ನಂತರ ಅಭ್ಯಾಸದ ಬಲದಿಂದ ಸುಮ್ಮನಿರಲಾರದೆ ಅಡವಿಗೆ ಹೋಗಿ ಜಿಂಕೆಯೊಂದನ್ನು ತನ್ನ ಬಾಣದಿಂದ ಕೊಂದು ಹಾಕಿದ ಆ ಯುವಕ. ಆದರೆ ತಾನು ಮಾಡಿದ ಕೆಲಸವನ್ನು ಯಾರೊಂದಿಗೂ ತಿಳಿಸಲಿಲ್ಲ.

ನಿತ್ಯದಂತೆ ಸಾಯಂಕಾಲ ಮನೆಗೆ ಹಿಂತಿರುಗುವಾಗ ಬೆಳ್ಳಿ ತುತ್ತೂರಿ ಊದಿದ. ಅದನ್ನು ಊದಿದಾಗ ನಿತ್ಯವೂ ಅವನ ಹೆಂಡತಿ ಎದುರಾಗಿ ಬಂದು ಸ್ವಾಗತಿಸುತ್ತಿದ್ದಳು. ಆ ದಿನ ಎಷ್ಟು ಹೊತ್ತು ಊದಿದರೂ ಹೆಂಡತಿ ಎದುರಾಗಿ ಬರಲಿಲ್ಲ. ಅಷ್ಟರಲ್ಲಿ ಕತ್ತಲಾಯಿತು. ಆಕಾಶದಲ್ಲಿ ಚುಕ್ಕಿಗಳು ಪ್ರಕಾಶಿಸುತ್ತಿದ್ದುವು. ರೈತಯುವಕನು ಹೆಂಡತಿಯನ್ನು ಎಷ್ಟು ಕರೆದರೂ ಆಕೆ ಬರಲಿಲ್ಲ. ಮನೆಗೆ ಬಂದು ನೋಡಿದರೆ ಆಕೆ ಎಲ್ಲೂ ಕಾಣಬರಲಿಲ್ಲ.

ಮಾರನೆಯ ದಿವಸ—

ಅವನು ಮಾಮೂಲಿನಂತೆ ದನಗಳ ಮಂದೆಯನ್ನು ಹೊಡೆದುಕೊಂಡು ಕಾಡಿಗೆ ಮೇಯಿಸಲು ಹೊರಟ.

ಅಲ್ಲಿ ಅವನ ಜೊತೆಗಾರ ದನ ಕಾಯುವವನು ಹೀಗೆಂದ: "ಎಲವೋ ಅಣ್ಣಾ! ನಿನ್ನೆ ನಾನು ಮೇಕೆಗಳನ್ನು ಮೇಯಿಸುತ್ತಿರುವಾಗ ಒಂದು ವಿಚಿತ್ರವನ್ನು ಕಂಡೆ. ಬೆಟ್ಟದಮೇಲೆ

ಒಬ್ಬ ಹುಡುಗಿ ನಿಂತಿದ್ದಳು. ಆಕೆ ಎಳೆನಗು ಬೀರುತ್ತಾ ವನದೇವತೆಯಂತೆ ಕಂಗೊಳಿಸಿದಳು. ಸುಶ್ರಾವ್ಯವಾಗಿ ಸೊಗಸಾದ ಹಾಡೊಂದನ್ನು ಹಾಡಿದಳು. ರೆಪ್ಪೆ ಅಲುಗಿಸದೆ ಆಕೆಯನ್ನೇ ನೋಡುತ್ತಾ ಇದ್ದೆ. ಅಷ್ಟರಲ್ಲಿ ಎಲ್ಲಿಂದಲೋ ಬಂದು ಬಾಣ ಆಕೆಯಕಡೆ ರೊಯ್ಯನೆ ಹೋಯಿತು. ಆದರೆ ಏಟು ಬೀಳುವ ಮುನ್ನಆಕೆ ಅದೃಶ್ಯಳಾದಳು. ಆಕೆಯ ಅದೃಶ್ಯಕ್ಕೆ ಕಾರಣ ಕರ್ತವಾದ ಬಾಣ ಇದೇ!" ಎಂದು ತನ್ನ ಕೈಯಲ್ಲಿದ್ದ ಬಾಣವನ್ನು ಆ ಯುವಕನಿಗೆ ಕೊಟ್ಟ.

ಆ ಯುವಕನ ಆಶ್ಚರ್ಯಕ್ಕೆ ಕೊನೆಯಿಲ್ಲದಂತಾಯಿತು. ಆ ಬಾಣವನ್ನು ಪರೀಕ್ಷಿಸಿ ನೋಡಲು, ತಾನು ನಿನ್ನೆ ಜಿಂಕೆಗೆ ಗುರಿಯಿಟ್ಟು ಹೊಡೆದ ಬಾಣ ಅದುವೇ ಆಗಿತ್ತು!

ಆಗ ಆ ಯುವಕನಿಗೆ ಕುಳ್ಳರು ಹೇಳಿದ್ದ ಎಚ್ಚರಿಕೆ ನೆನಪಾಯಿತು. ತನ್ನ ಬಿಲ್ಲು ಬಾಣಗಳಲ್ಲಿ ಬೇಸರಹುಟ್ಟಿ, ಅವುಗಳನ್ನು ಕೂಡಲೇ ಬೆಂಕಿಗೆ ಹಾಕಿ ಭಸ್ಮಮಾಡಿದ. ಮತ್ತೊಂದು ಸಲ ಖಚಿತವಾಗಿ ಪ್ರತಿಜ್ಞೆಮಾಡಿದ. ಅಂದಿನಿಂದ ದನ ಕಾಯುವುದನ್ನು ಹೊರತು ಇತರ ಕೆಲಸಗಳನ್ನು ಬಿಟ್ಟುಬಿಟ್ಟ. ಮತ್ತೆ ತನ್ನ ಹೆಂಡತಿ ಬರುವಳೇನೋ ಎಂದು ಬಹಳಕಾಲ ಎದುರು ನೋಡಿದ.

ಒಂದು ದಿನ ರಾತ್ರಿ ಕನಸಿನಲ್ಲಿ ಅಂದು ಕಾಣಿಸಿದ ಕುಳ್ಳರು ಕಾಣಿಸಿಕೊಂಡು "ಅಯ್ಯಾ ಮಾತುಕೊಟ್ಟು, ಮೀರಿ ನಡೆಯುವುದು ಮಹಾಪರಾಧ. ಇದರ ಫಲವನ್ನು ನೀನು ಅನುಭವಿಸಿದೆ. ಇನ್ನಾದರೂ ಮಾತು ಮೀರಿ ನಡೆಯದಿದ್ದರೆ ನಿನ್ನ ಹೆಂಡತಿ ಇನ್ನೊಂದು ವರ್ಷಕ್ಕೆಲ್ಲಾ ನಿನ್ನಲ್ಲಿಗೆ ಬರುತ್ತಾಳೆ. ನೀನು ಸುಖಪಡುವೆ" ಎಂದರು.

ರೈತ ಯುವಕನು ತನ್ನ ಮಾತು ಮುರಿಯಲಿಲ್ಲ. ವರ್ಷ ತುಂಬಿತು. ಒಂದು ಸಂಜೆ ಅಡವಿಯಿಂದ ಮನೆಗೆ ಬರುತ್ತಿರುವಾಗ ತಟಕ್ಕನೆ ಅವನ ಹೆಂಡತಿ ಎದುರಾಗಿ ಬಂದಳು. ಆ ರೈತ ಯುವಕನು ಆನಂದದಿಂದ ಮೈಮರೆತನು. ಅವನು ತನ್ನ ಬಾಳನ್ನೆಲ್ಲಾ ಪಶುಪೋಷಣೆಯಲ್ಲೇ ಕಳೆದು, ತನ್ನ ಮಾತನ್ನು ನಿಲ್ಲಿಸಿಕೊಂಡು ಹೆಂಡತಿಯೊಂದಿಗೆ ಸುಖವಾಗಿದ್ದನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1954 ನವಂಬರ್ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟು ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಸೆಪ್ಟೆಂಬರ್ 7 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.
ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು-26.

---

### ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ : ಅಹ್ಹ ಹಾ—ಹಾಸ!

ಎರಡನೇ ಫೋಟೋ : ಇಹ್ಹಿ ಹೀ—ವೇಷ!

ಕಳಿಸಿದವರು: ಬಿ. ರಾಧಾಕೃಷ್ಣರಾವ್, 1-826, ಸುಲ್ತಾನ್‌ಬತ್ತೇರಿ ರಸ್ತೆ, ಮಂಗಳೂರು—3. (ದ. ಕ.)

ಬಹುಮತಿ ರೂ. 10/-ನ್ನು ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.



# ಕಿನ್ನರರಾಣಿ

**ಪೂ**ರ್ವಕಾಲದಲ್ಲಿ ಕಾಶ್ಮೀರದೇಶದಲ್ಲಿ ಒಬ್ಬ ಬಡವನಿದ್ದ. ಅವನು ಪ್ರತಿನಿತ್ಯವೂ ಕಾಡಿಗೆ ಹೋಗಿ, ಪಕ್ಷಿಗಳನ್ನು ಹಿಡಿದು ಮಾರಿ, ಬಂದ ಹಣದಿಂದ ತನ್ನಮಗ ಸುಧಾಮನನ್ನು ಸಾಕುತ್ತಿದ್ದ. ತಂದೆ ತೀರಿಹೋದಮೇಲೆ ಸುಧಾಮನು ಒಂಟಿಯಾದ; ತನ್ನ ಹೊಟ್ಟೆಪಾಡಿಗಾಗಿ ದುಡಿಯಬೇಕಾಯಿತು ಸುಧಾಮ.

ತಂದೆ ಸತ್ತ ಮೂರನೆಯ ದಿವಸವೇ ಸುಧಾಮನು ಪಕ್ಷಿಗಳ ಬೋನು ತೆಗೆದುಕೊಂಡು ಅರಣ್ಯಕ್ಕೆ ಹೋಗಿ ಅದನ್ನು ಮರದ ಕೊಂಬೆಯಮೇಲಿರಿಸಿ ಕಾದುಕುಳಿತಿದ್ದ. ಸ್ವಲ್ಪ ಹೊತ್ತಿಗೆಲ್ಲಾ ಬೋನಿನಲ್ಲಿ ಯಾವುದೋ ಒಂದು ಪಕ್ಷಿ ಸಿಕ್ಕಿಕೊಂಡಿತು. ಮರವನ್ನು ಹತ್ತಿ ನೋಡಿದ. ಬೋನಿನಲ್ಲಿ ಬಿದ್ದಿತ್ತು ಒಂದು ಕಾಗೆ. ಕಾಗೆಯನ್ನು ಯಾರು ಕೊಳ್ಳುತ್ತಾರೆ? ಸುಧಾಮನು ಮುಂದೇನು ಮಾಡಬೇಕೆಂದು ಯೋಚಿಸುತ್ತಿರುವಾಗ, ಆ ಕಾಗೆ ಮಾನವ ಭಾಷೆಯಲ್ಲಿ "ಅಯ್ಯಾ, ನನ್ನನ್ನು ಈಗ ಬಿಟ್ಟುಬಿಟ್ಟರೆ ಮುಂದೆ ನಿನಗೆ ತುಂಬಾ ಉಪಕಾರ ಮಾಡುತ್ತೇನೆ. ನಾಳೆ ನಿನ್ನ ಬೋನಿನಲ್ಲಿ ಅತ್ಯಂತ ಸುಂದರವಾದ ಪಕ್ಷಿ ಬೀಳುವಂತೆ ಏರ್ಪಡಿಸುವೆ. ಅದನ್ನು ಮಹಾರಾಜರಲ್ಲಿಗೆ ತೆಗೆದುಕೊಂಡು ಹೋದರೆ ನಿನಗೆ ಮಿತಿಯಿಲ್ಲದಷ್ಟು ಧನವನ್ನು ಕೊಡುವರು" ಎಂದಿತು.

ಕಾಗೆಯ ಮಾತನ್ನು ನಂಬಿ ಸುಧಾಮನು ಅದನ್ನು ಬಿಟ್ಟನು. ಕಾಗೆ ಹೇಳಿದಂತೆ ಮೂರನೆಯದಿನ ಮನೋಹರವಾದ ಪಕ್ಷಿಯೊಂದು ಬೋನಿನಲ್ಲಿ ಸೆರೆಸಿಕ್ಕಿತು. ಅಷ್ಟು ಸುಂದರವಾದ ಪಕ್ಷಿಯನ್ನು ಆತ ಎಂದೂ ನೋಡಿರಲಿಲ್ಲ. ಅದನ್ನು ತೆಗೆದುಕೊಂಡು ಹೋಗಿ ಮಹಾರಾಜರಿಗೆ ಒಪ್ಪಿಸಲು ಅವರು ತುಂಬಾ ಸಂತೋಷಗೊಂಡರು. ಸುಧಾಮನಿಗೆ ಯಥೇಚ್ಛವಾಗಿ ಚಿನ್ನವನ್ನು ಕೊಟ್ಟರು. ಅಷ್ಟೊಂದು ಐಶ್ವರ್ಯ ಬಂದರೂ ಸುಧಾಮನ ಕಷ್ಟಗಳು ಮಾತ್ರ ಕೊನೆಗಾಣಲಿಲ್ಲ.

ಏಕೆಂದರೆ ಕಾಶ್ಮೀರ ಮಹಾರಾಜರಲ್ಲಿ ಒಬ್ಬ ವಿದೂಷಕನಿದ್ದ. ಒಂದು ಹಕ್ಕಿಗಾಗಿ ಸುಧಾಮನಿಗೆ ಅಷ್ಟು ಹಣ ಕೊಟ್ಟುದುದನ್ನು ತಿಳಿದು

ಜಿ. ಟಿ. ಹೆಗಡೆ

ವಿದೂಷಕನಿಗೆ ಅಸೂಯೆ ಜನಿಸಿತು. ಆದುದರಿಂದ ಒಂದುದಿನ ಮಹಾರಾಜರ ಹತ್ತಿರ "ಪ್ರಭೂ, ಇಷ್ಟು ಅಂದವಾದ ಪಕ್ಷಿಯನ್ನು ಸಾಧಾರಣವಾದ ಪಂಜರದಲ್ಲಿಡುವುದು ಸರಿಯಲ್ಲ. ಇದಕ್ಕಾಗಿ ಸುಂದರವಾದ ದಂತದ ಸೌಧವನ್ನು ಮಾಡಿಸಿ" ಎಂದ.

"ಮನೆ ಕಟ್ಟಿಸುವಷ್ಟು ದಂತ ಎಲ್ಲಿ ಸಿಗುತ್ತದೆ" ಎಂದ ಮಹಾರಾಜ.

"ಇಷ್ಟು ಲಕ್ಷಣವಾದ ಪಕ್ಷಿಯನ್ನು ತಂದಾತನು ಅವರ ಮನೆಗೆ ಸಾಕಾಗುವಷ್ಟು ದಂತವನ್ನು ಒದಗಿಸಲಾರನೇ? ತರುವಂತೆ ಆಜ್ಞೆ ಮಾಡಿ" ಎಂದು ವಿದೂಷಕ ಸಲಹೆ ಕೊಟ್ಟ.

ಮಹಾರಾಜರು ಸುಧಾಮನನ್ನು ಬರಮಾಡಿ "ನೀನು ತಂದ ಪಕ್ಷಿಗಾಗಿ ದಂತದ ಸೌಧ ನಿರ್ಮಿಸಬೇಕಾಗಿದೆ. ಅದಕ್ಕಾಗುವಷ್ಟು ದಂತ ತಂದಕೊಡು. ನಲವತ್ತು ದಿವಸಗಳ ಕಾಲಾವಕಾಶ ಕೊಡುತ್ತೇನೆ. ಇಲ್ಲವಾದರೆ ನಿನ್ನ ತಲೆ ತೆಗೆಸಿಬಿಡುವೆನು" ಎಂದರು.

ಸುಧಾಮನು ಚಿಂತಿಸುತ್ತಾ ಮನೆಗೆ ಹಿಂತಿರುಗಿದ. ಮನೆ ಕಟ್ಟಲು ಬೇಕಾಗುವಷ್ಟು ದಂತ ತರಿಸಿಕೊಳ್ಳಲು ಸಾಧ್ಯವಿಲ್ಲದ ಕಾರಣದಿಂದಲೇ ನನಗೆ ಈ ಕೆಲಸ ಹಚ್ಚಿದ್ದಾರೆ. ತನಗೆ ಮರಣ ದಂಡನೆ ತಪ್ಪುವಂತಿಲ್ಲವೆಂದು ಅವನು ಭಾವಿಸಿದ. ಅಷ್ಟರಲ್ಲಿ ಕಾಗೆ ಬಂದು "ಏನು ಯಜಮಾನರೇ, ಯಾಕಿಷ್ಟು ಯೋಚಿಸುತ್ತಿರುವಿರಿ?" ಎಂದು ವಿಚಾರಿಸಿತು. ಸುಧಾಮನು ತನ್ನ ಕಷ್ಟವನ್ನು ಕಾಗೆಗೆ




ಹೇಳಿದ. "ಇದಕ್ಕಾಗಿ ಇಷ್ಟು ಯೋಚಿಸಬೇಕೇ? ಮಹಾರಾಜರನ್ನು ನಲವತ್ತು ಪೀಪಾಯಿಗಳ ಸಾರಾಯಿ ಬೇಕೆಂದು ಕೇಳಿ. ಇಲ್ಲಿಗೆ ನೂರು ಯೋಜನೆಗಳ ದೂರದಲ್ಲಿ ಒಂದು ಕೊಳವಿದೆ. ಆ ಕೊಳದ ಬಳಿಗೆ ಆನೆಗಳು ಗುಂಪುಗುಂಪಾಗಿ ಬಂದು ನೀರು ಕುಡಿಯುತ್ತವೆ. ಆ ಕೊಳದಲ್ಲಿ ಸಾರಾಯಿ ಸುರಿದರೆ ನಿಮ್ಮ ಕೆಲಸ ಈಡೇರುವುದು" ಎಂದಿತು.

ಸುಧಾಮನು ಕೂಡಲೇ ಮಹಾರಾಜನಲ್ಲಿಗೆ ಹೋಗಿ "ಪ್ರಭೂ, ನಲವತ್ತು ಪೀಪಾಯಿಗಳಲ್ಲಿ ಸಾರಾಯಿ ತುಂಬಿ, ಗಾಡಿಗಳಲ್ಲಿ ಹೇರಿ, ನನ್ನೊಂದಿಗೆ ಕಳುಹಿಸಿದರೆ ತಮಗೆ ಬೇಕಾಗುವಷ್ಟು ದಂತವನ್ನು ಅವಧಿ ಮುಗಿಯುವುದರೊಳಗೆ ತರುತ್ತೇನೆ" ಎಂದ. ಮಹಾರಾಜರು




ಸರಿ ಎಂದು ಗಾಡಿಗಳ ಮೇಲೆ ನಲವತ್ತು ಪೀಪಾಯಿ ಸಾರಾಯಿ ಕಳುಹಿಸಿದರು.

ಆನೆಗಳು ಬರುವ ಕೊಳವನ್ನು ಸೇರಿದ್ದಾಯಿತು. ಆ ಕೊಳದಲ್ಲಿ ಸಾರಾಯಿ ಸುರಿಸಿದ. ಆ ರಾತ್ರಿ ಆನೆಗಳ ಭಾರಿದಂಡು ಬಂತು. ಆನೆಗಳು ಸಾರಾಯಿ ಬೆರೆದಿರುವ ನೀರನ್ನು ಕುಡಿದು ಅಮಲೇರಿ ಬಿದ್ದುಬಿಟ್ಟವು. ಸುಧಾಮನು ತನ್ನೊಂದಿಗೆ ತಂದಿದ್ದ ಗರಗಸದಿಂದ ಗಂಡಾನೆಗಳ ದಂತಗಳನ್ನು ಕೊಯಿದು ಗಾಡಿಗಳಲ್ಲಿ ತುಂಬಿಸಿ ವಾಪಸು ಪ್ರಯಾಣ ಮಾಡಿದ.

ದಂತವನ್ನು ನೋಡಿ ಮಹಾರಾಜರು ಸಂತೋಷಚಿತ್ತರಾದರು. ಸುಧಾಮನಿಗೆ ಮತ್ತಷ್ಟು ಬಹುಮಾನವನ್ನಿತ್ತರು. ಪಕ್ಷಿಗಾಗಿ ದಂತದ ಮನೆಯನ್ನು ತಯಾರಿಸಲಾಯಿತು.

ಇದನ್ನು ಕಂಡು ವಿದೂಷಕನು ಮತ್ತಷ್ಟು ಉರಿದುಬಿದ್ದ. ಅವನು ಮಹಾರಾಜರಲ್ಲಿಗೆ ಹೋಗಿ "ಮಹಾ ಪ್ರಭೂ, ತಮ್ಮ ಪಕ್ಷಿ ದಂತದ ಮಹಲಿನಲ್ಲಿದ್ದರೂ ಸಹ ಅದರ ಮನಸ್ಸಿಗೆ ಆನಂದವಿಲ್ಲ. ಅದರಿಂದಲೇ ಕೊರಳೆತ್ತಿ ಹಾಡುವುದಿಲ್ಲ" ಎಂದ.

"ಅದಕ್ಕೆ ನಾವೇನು ಮಾಡಬಲ್ಲೆವು?" ಎಂದು ಕೇಳಿದರು ಮಹಾರಾಜರು.

"ಅದರ ಪೂರ್ವ ಯಜಮಾನನನ್ನು ಕರೆತಂದ ಹೊರತು ಅದು ಸಂತೋಷದಿಂದ ಹಾಡುವಂತಿಲ್ಲ. ಆ ಯಜಮಾನನನ್ನು ಬರಮಾಡಿಸಿ" ಎಂದ ವಿದೂಷಕ.

"ಅದರ ಯಜಮಾನನು ಯಾರೋ ನಮಗೆಂತು ತಿಳಿಯಬೇಕು? ನಾವು ಕರೆಸುವುದು ತಾನೇ ಹೇಗೆ?" ಎಂದರು ಮಹಾರಾಜರು.

"ಅಷ್ಟೊಂದು ದಂತವನ್ನು ತಂದಾತನು ಈ ಪಕ್ಷಿಯ ಯಜಮಾನನನ್ನು ಬರಮಾಡಲಾರನೇ?" ಎಂದನಾ ವಿದೂಷಕ.

ಮಹಾರಾಜರು ಮತ್ತೆ ಸುಧಾಮನನ್ನು ಬರಮಾಡಿಕೊಂಡು "ಈ ಪಕ್ಷಿಯ ಯಜಮಾನನನ್ನು ನಲವತ್ತು ದಿವಸಗಳಲ್ಲಿ ಕರೆದುಕೊಂಡು ಬರಬೇಕು. ಇಲ್ಲವಾದರೆ ನಿನ್ನ ತಲೆ ಹಾರುವುದು" ಎಂದರು.

ಸುಧಾಮನು ತನ್ನ ಕಷ್ಟಗಳು ಇನ್ನೂ ಮುಗಿಯದಿರಲು ಖಿನ್ನನಾದ. ಯೋಚಿಸುತ್ತಾ ಆತನು ತನ್ನ ಮನೆ ಸೇರಿದ. ಅವನಿರುವಲ್ಲಿಗೆ ಮತ್ತೆ ಕಾಗೆ ಬಂದು ವಿಚಾರ ಕೇಳಿತು. ತನ

ಗೊದಗಿದ ಕಷ್ಟವನ್ನು ಸುಧಾಮನು ಕಾಗೆಗೆ ತಿಳಿಸಿದ. "ಇದಕ್ಕೆ ಇಷ್ಟೊಂದು ಯೋಚಿಸ ಬೇಕೆ? ಮಹಾರಾಜರನ್ನು ಕೇಳಿ ಒಂದು ಹಡಗನ್ನು ತೆಗೆದುಕೊಳ್ಳಿ. ಅದರಲ್ಲಿ ರಾಜ ಭೋಗ ಯೊಗ್ಯವಾದುದನ್ನೆಲ್ಲಾ ಏರ್ಪಡಿಸಿ. ಆ ನೌಕೆಯನ್ನು ಹತ್ತಿ ನದಿಯ ಮುಖಾಂತರ ಪೂರ್ವದಿಕ್ಕಿನಲ್ಲಿ ನೂರು ಯೋಜನೆಗಳ ಪ್ರಯಾಣ ಮಾಡಿದರೆ ಅಲ್ಲಿ ಕಿನ್ನರರ ವಾಸ ಸ್ಥಳ ಸಿಗುವುದು. ಅವರೆಲ್ಲರೂ ಹಡಗನ್ನು ನೋಡಲು ಬರುತ್ತಾರೆ. ಆದರೆ ಕಿನ್ನರ ರಾಣಿಯ ಹೊರತು ಇತರರು ಯಾರನ್ನೂ ಹಡಗು ಹತ್ತಲು ಬಿಡಬಾರದು. ಆಗ ಅವಳೇ ಬರುತ್ತಾಳೆ. ಆಕೆಯನ್ನು ಕೂರಿಸಿಕೊಂಡು ಪ್ರಯಾಣಮಾಡಿಬಿಡಿ. ಆಕೆಯೇ ಆ ಪಕ್ಷಿಯ ಯಜಮಾನಳು" ಎಂದು ತಿಳಿಸಿತು ಕಾಗೆ.

ಕಾಗೆ ತಿಳಿಸಿದಂತೆ ಸುಧಾಮನು ಮಹಾ ರಾಜರನ್ನು ಕೇಳಿ ಒಂದು ಹಡಗನ್ನು ಸಂಪಾದಿಸಿದ. ಅದರಲ್ಲಿ ಸ್ನಾನಗೃಹ, ಹಾಸಿಗೆ, ವಿಹಾರಸ್ಥಳ ಮುಂತಾದ ಎಲ್ಲ ಸೌಕರ್ಯಗಳನ್ನು ಸಿದ್ಧಪಡಿಸಿದ. ನದಿಯ ಮೂಲಕ ಪೂರ್ವದಿಕ್ಕಿನಕಡೆ ಪ್ರಯಾಣ ಮಾಡಿದ.

ಕೊಂಚಕಾಲ ಪ್ರಯಾಣ ಮಾಡಿದನಂತರ ಬೆಟ್ಟಗಳ ನಡುವೆ ಕಿನ್ನರರ ಪ್ರದೇಶ ದೊರೆಯಿತು. ಎಂದೂ ಹಡಗನ್ನು ಕಾಣದ ಕಿನ್ನರರು ಅದರ ಸುತ್ತಲೂ ಮುತ್ತಿದರು.

ಸುಧಾಮನು ಅವರನ್ನು ಒಳಗೆಬರಲು ಬಿಡಲಿಲ್ಲ. "ಮೊದಲು ನಿಮ್ಮ ರಾಣಿಗೆ ಹಡಗನ್ನು




ತೋರಿಸುತ್ತೇನೆ. ಅನಂತರ ಉಳಿದವರು ನೋಡಬಹುದು" ಎಂದ ಸುಧಾಮ. ಈ ಸಮಾಚಾರ ಕೇಳಿ ಕಿನ್ನರ ರಾಣಿ ಪರಮಾನಂದಭರಿತಳಾಗಿ ಹಡಗನ್ನು ಹತ್ತಿದಳು. ಆ ನೌಕೆಯ ಒಂದೊಂದು ಕೊಠಡಿ, ಅದರಲ್ಲಿ ಅಳವಡಿಸಿದ್ದ ಅಲಂಕಾರ, ದೀಪ, ತಿವಾಸಿ, ಸುಪ್ಪತ್ತಿಗೆಗಳನ್ನು ನೋಡುತ್ತಿರಲು ಆಕೆಗೆ ಕಾಲ ಕಳೆದುದೇ ತಿಳಿಯಲಿಲ್ಲ. ಅಷ್ಟರಲ್ಲಿ ಹಡಗಿನ ತೆರೆಚಾಪೆಗಳನ್ನು ಹರಡಿ ಮನೆಯ ಕಡೆ ನಡೆಸಿದರು ನೌಕೆಯನ್ನು! ಕಿನ್ನರರಾಣಿ ಹಡಗನ್ನೆಲ್ಲಾ ಪೂರ್ತಿಯಾಗಿ ನೋಡುವ ವೇಳೆಗೆ ಅದು ನಾಲ್ಕೈದು ಯೋಜನ ದೂರ ದಾಟಿತ್ತು. ಕಿನ್ನರರಾಣಿ ಬಂದಿಯಾದಳು. ಸುಧಾಮನು ಕಿನ್ನರರಾಣಿ ಯೊಂದಿಗೆ

ಮಹಾರಾಜರ ಅರಮನೆ ಯೊಳಗೆ ಕಾಲಿಟ್ಟ ಕೂಡಲೇ ದಂತದ ಮಹಲಿನಲ್ಲಿದ್ದ ಪಕ್ಷಿ ಮೃದು ಮಧುರವಾಗಿ ಹಾಡಿತು. ಮಹಾ ರಾಜರೂ ಪರವಶವಾದರು. ಕಿನ್ನರರಾಣಿ ಯನ್ನು ಮದುವೆಯಾಗಲು ಮಹಾರಾಜರು ಬಯಸಿದರು. ಆಕೆಯೂ ಒಪ್ಪಿದಳು.

ಮದುವೆಯ ಪ್ರಯತ್ನಗಳು ತುಂಬಾ ಸಡಗರದಿಂದ ಸಾಗುತ್ತಿದ್ದವು. ಮದುವೆಗೆ ಗಣ್ಯ ಮಹನೀಯರೆಲ್ಲರೂ ಬಂದರು. ಸುಧಾ ಮನಿಗೂ ಆಹ್ವಾನಹೋಯಿತು. ನಿಜ ಹೇಳ ಬೇಕೆಂದರೆ ಮದುವೆಯ ಮನೆಯಲ್ಲಿ ಅವನದೇ ಓಡಾಟ ಹೆಚ್ಚಾಗಿತ್ತು.

ಆ ಸಮಯದಲ್ಲಿ ಮದುವೆಯನ್ನು ನೋಡಲು ಸುಧಾಮನ ಭುಜದಮೇಲೆ ಕುಳಿತು ಗೆಳೆಯ ಕಾಗೆಯೂ ಹಾಜರಾಯಿತು. ಆ ಕಾಗೆಯನ್ನು ಕಂಡು ಕಿನ್ನರರಾಣಿ ಸಿಡಿ ಮಿಡಿಗೊಂಡು ಬಯ್ಯತೊಡಗಿದಳು.

"ಈ ಕಾಗೆ ನನ್ನ ಆಪ್ತ ಸ್ನೇಹಿತ. ಇದ ರಿಂದ ಏನಾದರೂ ಅಪಚಾರ ನಡೆದಿದ್ದರೆ ಕ್ಷಮಿಸಿ!" ಎಂದು ಸುಧಾಮನು ಕಿನ್ನರರಾಣಿ ಯನ್ನು ಪ್ರಾರ್ಥಿಸಿದ. ಕಾಗೆಯಿಂದ ತನಗಾದ ಸಹಾಯವನ್ನು ವಿವರಿಸಿದ. ಆ ಕಥೆಯನ್ನು ಕೇಳಿ ಕಿನ್ನರರಾಣಿ ಶಾಂತಳಾದಳು.

"ಇವಳು ನನ್ನ ಸಖಿ. ತುಂಬಾ ಗರ್ವಿಷ್ಠೆ. ಅದರಿಂದಲೇ ಆಕೆಯನ್ನು ಕಾಗೆಯನ್ನಾಗಿ ಬದಲಾಯಿಸಿದೆ. ಶಿಕ್ಷಿಸಿದರೂ ನನ್ನಲ್ಲಿ ಇನ್ನೂ ಅಭಿಮಾನವನ್ನಿಟ್ಟುಕೊಂಡಿರುವಂತಿದೆ. ಅದ ರಿಂದ ಇದಕ್ಕೆ ಶಾಪವಿಮೋಚನೆ ಮಾಡುತ್ತೇನೆ" ಎಂದಳು ಕಿನ್ನರರಾಣಿ. ಮರುಕ್ಷಣವೇ ಸುಧಾ ಮನ ಭುಜದಮೇಲಿದ್ದ ಕಾಗೆ ರೆಕ್ಕೆಗಳನ್ನು ಬಡಿಯುತ್ತಾ ಕಿನ್ನರಿಯ ರೂಪದಲ್ಲಿ ಸುಧಾ ಮನ ಪಕ್ಕದಲ್ಲಿ ನಿಂತಿತು.

ಇದೆಲ್ಲವನ್ನೂ ಕಂಡು ಕಾಶ್ಮೀರರಾಜನಿಗೆ ಅತ್ಯಾನಂದವಾಯಿತು. ತಮ್ಮ ಮದುವೆ ಯೊಂದಿಗೆ ಸುಧಾಮನಿಗೂ ಆ ಕಿನ್ನರಕನ್ಯೆ ಯೊಂದಿಗೆ ಮದುವೆ ಮಾಡಿಸಿದರು.

ದುಷ್ಟಬುದ್ಧಿಯ ವಿದೂಷಕನಿಗೆ ಶಿಕ್ಷೆ ಆಯಿತು. ಸುಧಾಮನು ರಾಜನ ಆಸ್ಥಾನ ದಲ್ಲಿ ತನ್ನ ಕಿನ್ನರ ಭಾರ್ಯೆಯೊಂದಿಗೆ ಸುಖ ವಾಗಿ ಕಾಲ ಕಳೆಯುತ್ತಿದ್ದ.






ಒಂದೂರಿನ ಹೊರಗಡೆ ಖಾಲಿ ಪ್ರದೇಶದಲ್ಲಿ ಒಂದು ಹುಣಿಸೆ ಮರವಿತ್ತು. ಅದರ ಬುಡದಲ್ಲಿ ಒಂದು ತಿಪ್ಪೆಯಿತ್ತು. ಅದರಲ್ಲೊಂದು ಜಾಕಾಯಿ ಮರದ ಪೆಟ್ಟಿಗೆಯಿತ್ತು. ಅದರಲ್ಲೊಂದು ಚಿಟ್ಟೆಲಿ ವಾಸಮಾಡಿಕೊಂಡಿತ್ತು.

ಆ ಪೆಟ್ಟಿಗೆಯ ಒಂದು ಮೂಲೆಯಲ್ಲಿ ತೂತೊಂದು ಇತ್ತು. ಚಿಟ್ಟೆಲಿ ಹೋಗಿಬರಲು ಆ ತೂತು ಅನುಕೂಲವಾಗಿತ್ತು. ಮಳೆ ಬಂದರೂ ಶತ್ರುಭೀತಿಯುಂಟಾದರೂ, ಚಿಟ್ಟೆಲಿ ಆ ಪೆಟ್ಟಿಗೆಯಲ್ಲಿ ಅವಿತಿಟ್ಟುಕೊಳ್ಳುವುದು. ಆ ಪೆಟ್ಟಿಗೆಯೊಳಗೇ ಒಂದು ಬದಿಯಲ್ಲಿ ಒಂದಿಷ್ಟು ಧಾನ್ಯರಾಶಿ ಮಾಡಿಕೊಂಡು ಸುಖವಾಗಿ ಕಾಲ ಕಳೆಯುತಿತ್ತು.

ಚಿಟ್ಟೆಲಿಗೂ ಹುಣಿಸೇಮರದ ಮೇಲಿದ್ದ ಗುಬ್ಬಚ್ಚಿಗೂ ಸ್ನೇಹ. ಅದರಿಂದ ಒಂದುದಿನ ಗುಬ್ಬಚ್ಚಿ ಚಿಟ್ಟೆಲಿಯ ಮನೆ ನೋಡಲು ಬಂದಿತು. ಮನೆ ಕಂಡಿತಾದರೂ ಚಿಟ್ಟೆಲಿ ಕಾಣಲಿಲ್ಲ. ಕಷ್ಟಪಟ್ಟುಕೊಂಡು ತೂತಿನ ಬಳಿಗೆ ಬಂದು ಒಳಕ್ಕೆ ಇಣಿಕಿ ನೋಡಿತು.

ಗುಬ್ಬಿಯನ್ನು ಕಂಡು "ಹೇಗಿದೆ ಮನೆ?" ಎಂದು ಕೇಳಿತುಚಿಟ್ಟೆಲಿ.

"ಏನಿದೆಯೋ ಏನೋ! ಕಿಟಕಿಯಿಲ್ಲ. ಹಾಳು ಪೆಟ್ಟಿಗೆಯಂತಿದೆ" ಎಂದಿತು ಗುಬ್ಬಚ್ಚಿ.

"ಚೆನ್ನಾಯಿತು! ಪೆಟ್ಟಿಗೆಯಂತಿರುವುದೇನು ಬಂತು, ಇದು ಒಂದು ಪೆಟ್ಟಿಗೆಯೇ! ಕಿಟಕಿ ಗಿಟಕಿ ಇದ್ದದ್ದೇ ಆದಪಕ್ಷಕ್ಕೆ ಬೆಕ್ಕು ಇಣಿಕಿ ನೋಡಿದರೆ ನನ್ನಗತಿ ಮುಗಿದಂತೆಯೇ" ಎಂದಿತು ಚಿಟ್ಟೆಲಿ.

"ಅಲ್ಲ ಚಿಟ್ಟೆಲಿ, ತಿಳಿಯದೇ ಕೇಳುತ್ತೇನೆ. ಇರುವುದೇ ಒಂದಿಷ್ಟು ಸ್ಥಳ. ಅದರಲ್ಲಿ ಈ ಧಾನ್ಯರಾಶಿ ಏಕೆ?" ಎಂದಿತು ಗುಬ್ಬಚ್ಚಿ.

"ಅದಿಲ್ಲದಿದ್ದರೆ ಹೇಗೆಅಕ್ಕ. ಮಳೆ ಬರುತ್ತೆ. ಎರಡು ದಿನಗಳಿಗಾದರೂ ದಾಸ್ತಾನು ಮಾಡಿಕೊಳ್ಳದಿದ್ದರೆ ಹೇಗಾಗುತ್ತೆ ಮತ್ತೆ; ಉಪವಾಸ ಬಿದ್ದು ಸಾಯಬೇಕೆ?" ಎಂದಿತು ಚಿಟ್ಟೆಲಿ.

"ಹಾಗಿರೋವಾಗ ನೀನಿಲ್ಲಿ ಅವಸ್ಥೆಪಡುವುದಕ್ಕೆ ಬದಲಾಗಿ ಹಾಗೆ ಕಾಲುವೆ ದಾಟಿ ಪಟೇಲರ ಹೊಲದಲ್ಲಿರುವ ಕಣಜವನ್ನು

ಎಂ. ಗಣೇಶನಾಯಕ




ಸೇರಿಕೋಬಾರದೇ?" ಎಂದು ಹೊಸಸೂಚನೆ ಕೊಟ್ಟಿತು ಗುಬ್ಬಚ್ಚಿ.

"ಅಲ್ಲೇನಿದೆ ಸುಖ?" ಎಂದಿತು ಚಿಟ್ಟೆಲಿ ಮೀಸೆಗಳನ್ನು ನಿಮಿರಿಸಿಕೊಂಡು.

"ಸೌಖ್ಯವೇ? ಅಲ್ಲಿ ನೂರಾರು ಚಿಟ್ಟೆಲಿಗಳು ಜೀವಿಸುತ್ತವೆ. ಧಾನ್ಯದಲ್ಲೇ ಹಾಸಿಗೆ. ಅಲ್ಲೇ ಕುಳಿತುಕೊಳ್ಳುವುದು, ಅದರೊಳಗೇ ತಿರುಗಾಡುವುದು. ಹಸಿವಾದಾಗಲೆಲ್ಲಾ ಸ್ವಲ್ಪ ತಲೆ ಪಕ್ಕಕ್ಕೆ ತಿರುಗಿಸಿದರೆ ಸಾಕು, ಕಾಳು ತಿನ್ನಬಹುದು. ಓ, ಎಷ್ಟು ದೊಡ್ಡರಾಶಿ ಎಂದುಕೊಂಡೆ! ಆ ರಾಶಿಯಲ್ಲಿ ಎಷ್ಟು ಸುರಂಗಗಳು, ಎಷ್ಟು ದಾರಿಗಳು!! ಎಷ್ಟೊಂದು ಗೂಡುಗಳು!!! ಒಂದು ಮಾತಿನಲ್ಲಿ ಹೇಳಲು ಸಾಧ್ಯವಿಲ್ಲ. ಹೋಗಿನೋಡಿದರೆ ತಿಳಿದೀತು."

ಚಿಟ್ಟೆಲಿಗೆ ಆದ ಆಶ್ಚರ್ಯಕ್ಕೆ ಅಳತೆಯೇ ಇಲ್ಲ. ಅದು ಗುಬ್ಬಚ್ಚಿಯ ಮಾತುಗಳನ್ನು ನಂಬಲಾರದಾಯಿತು. ಚಿಟ್ಟೆಲಿಗಳು ಜನಿಸಿರುವುದು ಕಷ್ಟಪಡುವ ಸಲುವಾಗಿಯೇ ಹೊರತು ಈ ರೀತಿ ರಾಜೋಪಚಾರ ಅನುಭವಿಸಲು ಅವುಗಳಿಗೆ ಸಾಧ್ಯವಿಲ್ಲವೆಂದು ಅದರ ಭಾವನೆ.

"ಅಕ್ಕಾ ನೀನು ಹೇಳುವುದು ನಿಜವಾದರೆ ಈ ಕ್ಷಣವೇ ಅಲ್ಲಿಗೆ ಹೋಗಬೇಕೆಂದು ಮನಸ್ಸು ಹಾತೊರೆಯುತ್ತಿದೆ" ಎಂದಿತು ಚಿಟ್ಟೆಲಿ.

"ನಷ್ಟವೇನಿದೆ? ಹೋಗಿ ನೋಡಪ್ಪಾ ತಮ್ಮಾ. ನಾನು ಹೇಳಿದ ಮಾತುಗಳಲ್ಲಿ ಸಟೆಯೇನಾದರೂ ಇದ್ದರೆ ನನ್ನ ಕೇಳು" ಎಂದು ಹೇಳಿ ಗುಬ್ಬಚ್ಚಿ ತುರ್ರನೆ ಹಾರಿಹೋಯಿತು.

* * *

ಅಂದು ಸಾಯಂಕಾಲವೇ ಚಿಟ್ಟೆಲಿ ಕಾಲುವೆಯ ಕಡೆ ಹೊರಟಿತು. ಸ್ವಲ್ಪದೂರ ಹೋಗುತ್ತಲೇ ಅದಕ್ಕೆ ನೀರಡಿಕೆಯಾಯಿತು. ಹಾಗೇ ಹೋಗುತ್ತಿರಲು ಅದಕ್ಕೆ ನೀರಿನ ಸಪ್ಪುಳ ಕೇಳಿಸಿತು. ಬಳಲಿ ಬಾಯಾರಿದ್ದ ಚಿಟ್ಟೆಲಿ ಕಾಲುವೆಯನ್ನು ಸೇರಿ, ದಡದಲ್ಲಿದ್ದ ಬಂಡೆಗಳ ಮೇಲೆ ಹಾರಿ ನೀರಿನಲ್ಲಿ ಮೂತಿಯನ್ನಿಟ್ಟು ಹೊಟ್ಟೆ ತುಂಬಾ ನೀರು ಕುಡಿದು, ತಲೆಯೆತ್ತಿ ಮೀಸೆಗಳನ್ನು ಒರೆಸಿಕೊಳ್ಳುತ್ತಿತ್ತು. ಆಗ ಒಂದು ಭಯಂಕರಶಬ್ದ ಕೇಳಿಸಿತು. ಅತ್ತಕಡೆ ನೋಡಲು ಒಂದು ದೊಡ್ಡ ತಾವರೆ ಎಲೆಯ ಮೇಲೆ ನೀರಿನೊಂದಿಗೆ ತೇಲಿಕೊಂಡು ಬರುತ್ತಿದ್ದ ಒಂದು ದೊಡ್ಡ ಕಪ್ಪೆ ಕಾಣಿಸಿತು.

ನೋಡುತ್ತಿದ್ದ ಹಾಗೆ ಆ ಎಲೆ ನೀರಿನ ಸುಳಿಗೆ ಗಿರ್ರನೆ ತಿರುಗಿತು; ಹಾಗೆಯೇ ಬಂದು ದಡದಲ್ಲಿದ್ದ ಕಲ್ಲಿನಮೇಲೆ ತಾಗಿತು. ಕಪ್ಪೆಯ ಪ್ರಯಾಣ ನಿಂತುಹೋಯಿತು.

"ತಮ್ಮಾ, ಕಾಲಿನಿಂದ ಎಲೆಯನ್ನು ಸ್ವಲ್ಪ ತಳ್ಳಿಬಿಡು" ಎಂದಿತು ಕಪ್ಪೆ ಗದ್ಗದವಾಗಿ.

"ಅದಕ್ಕೇನಂತೆ. ಅಲ್ಲ. ಪಠೇಲರ ಹೊಲ ಎಲ್ಲಿದೆಯೋ ಹೇಳಿ ಪುಣ್ಯಕಟ್ಟಿಕೊಳ್ಳಿ" ಎಂದಿತು ಚಿಟ್ಟೆಲಿ.

"ಇಲ್ಲೇ ಕೆಳಗಡೆಯಿದೆ. ಬೇಕಾದರೆ ನೀನೂ ಎಲೆಯಮೇಲೆ ಕುಳಿತುಕೋ ಜೊತೆಯಲ್ಲಿ ಹೋಗೋಣ" ಎಂದಿತು ಕಪ್ಪೆ.

ಸರಿ, ಎಂದು ಚಿಟ್ಟೆಲಿ ಛಂಗನೆ ಹಾರಿ ಎಲೆಯಮೇಲೆ ಕಪ್ಪೆಯ ಪಕ್ಕದಲ್ಲಿ ಕುಳಿತು ಕಾಲಿನಿಂದ ಕಲ್ಲನ್ನು ತಳ್ಳಿತು. ಎಲೆ ಮತ್ತೆ ನೀರಿನಲ್ಲಿ ಮುಂದೆ ಸಾಗಿತು.

"ಒಂದು ಕ್ಷಣವಿರು. ಆ ಕಲ್ಲಿನಮೇಲೆ ನೊಣವೊಂದಿದೆ" ಎಂದು ಕಪ್ಪೆ ತೀರದಲ್ಲಿದ್ದ ಕಲ್ಲಿನಮೇಲಕ್ಕೆ ನೆಗೆಯಿತು. ಮರುಕ್ಷಣದಲ್ಲೇ ದಬಕ್ಕನೆ ಈಚೆಗೆ ಹಾರಿತು. ಹಾಗೆ ಅದು ಹಾರಿದ ರಭಸಕ್ಕೆ ಚಿಟ್ಟೆಲಿ ನೀರಿನಲ್ಲಿ ಬೀಳುವ ಹಾಗಾಯಿತು. "ಹೇಳದೆ ಕೇಳದೆ ನೀನು ಹೀಗೆ ಕುಪ್ಪಳಿಸುವುದು ಚೆನ್ನಾಗಿಲ್ಲ. ಇನ್ನು ಸ್ವಲ್ಪದರಲ್ಲಿ ನಾನು ನೀರಿನ ಪಾಲಾಗುತ್ತಿದ್ದೆ" ಎಂದಿತು ಸಿಟ್ಟಿನಿಂದ ಚಿಟ್ಟೆಲಿ.

ಅದಕ್ಕೆ ಕಪ್ಪೆ ಪಕಪಕನೆ ನಗುತ್ತಾ "ಓ, ನೀರುತಾನೇ, ಈಜಿದರಾಯಿತು" ಎಂದಿತು.




"ಸಧ್ಯ, ನನಗೆ ಈಜಲು ಬಂದರಷ್ಟೇ?" ಎಂದಿತು ಚಿಟ್ಟೆಲಿ.

ಕಪ್ಪೆ ಏನೋ ಹೇಳಬೇಕೆಂದಿತ್ತು. ಅಷ್ಟರಲ್ಲಿ ಅದಕ್ಕೆ ಪಕ್ಕದಲ್ಲಿ ಯಾವುದೋ ಒಂದು ಹುಳ ಕಾಣಿಸಿತು. ಒಂದೇ ನೆಗೆತಕ್ಕೆ ಕಪ್ಪೆ ದಡಸೇರಿತು.

ಈಸಾರಿ ಚಿಟ್ಟೆಲಿ ನಿಜವಾಗಿ ನೀರಿನಲ್ಲಿ ಬಿತ್ತು. ತನಗೆ ಭೂಮಿಯ ಋಣ ಇನ್ನೇನು ತೀರಿತೆಂದುಕೊಳ್ಳುತ್ತಿರಲು ಒಂದು ಅಲೆ ಬಂದು ಚಿಟ್ಟೆಲಿಯನ್ನು ದಡಕ್ಕೆ ತಳ್ಳಿತು. ಸಾವುತಪ್ಪಿದರೆ ಮಾತ್ರವೇನು, ಚಿಟ್ಟೆಲಿ ನೆನೆದು ಒದ್ದೆಯಾಗಿ ಚಿಂತಿಸುತಿತ್ತು.

'ಅಷ್ಟು ಕೈಲಾಗದಿದ್ದರೆ ಈಜಬೇಕಿತ್ತೇಕೆ?' ಎಂಬ ಮಾತುಗಳು ಚಿಟ್ಟೆಲಿಗೆ ಕೇಳಿಸಿತು.



ಅದು ತಲೆ ಎತ್ತಿ ನೋಡಲು ಒಂದು ಮಾಲಿದ ಮರದ ಕೊಂಬೆಯಮೇಲಿರುವ ಅಳಿಲು ಕಾಣಿಸಿತು.

"ನಾನು ಬೇಕೆಂದು ಈಜಲು ಹೋಗುವೆನೇ, ಮಾವ. ಇದೆಲ್ಲಾ ಆ ದಿಕ್ಕೆಟ್ಟ ಕಪ್ಪೆಯ ಕೆಲಸ" ಎಂದು ಹೇಳುತ್ತ ಚಿಟ್ಟೆಲಿ ಸೀನಿತು.

"ಹೇಗೋ ಒಂದು ರೀತಿ ಮೈ ಒರಸಿಕೊಳ್ಳದಿದ್ದರೆ ನೆಗಡಿಯಾಗುವುದು ಖಂಡಿತ. ಇಲ್ಲೇ ಇರು, ಮೊನ್ನೆ ಮಳೆಗಾಳಿಗೆ ಹೊಡೆದು ಕೊಂಡು ಬಂದ ಹಳೆಯ ಬಟ್ಟೆ ಚೂರೊಂದು ತೊರ್ರೆಯಲ್ಲಿರಬೇಕು. ತರುತ್ತೇನೆ" ಎಂದು ಅಳಿಲು ಗಬಗಬನೆ ಮರವೇರಿ ಬಟ್ಟೆಯ ಚೂರಿನೊಂದಿಗೆ ಬಂದಿತು. ಚಿಟ್ಟೆಲಿ ಅದನ್ನು ಮೈಗೆ ಸುತ್ತಿಕೊಂಡು, ಬೆಚ್ಚಗೆ ಕೂತಿತ್ತು.

ಈ ವಿನೋದವನ್ನು ನೋಡಲು ಅಳಿಲಿನ ಮರಿಗಳು ಪೊಟರೆಯಿಂದ ಇಣಿಕಿನೋಡ್ತಿದವು. ಇಷ್ಟರಲ್ಲಿ ಆಕಾಶದಿಂದ 'ಕೃಷ್ಣಾ' ಎಂಬ ರಾಗವಾದ ಕೂಗು ಕೇಳಿಸಿತು.

"ಅದೋ, ಗರುಡ. ಎಲ್ಲಿದ್ದವರಲ್ಲೆ ಇರಿ. ಆ ಚೀಚೆ ಕದಲಬೇಡಿ. ಗಲಾಟೆ ಕೂಡದು" ಎಂದಿತು ಮರದಮೇಲಿದ್ದ ಕಾಗೆ.

"ಅಯ್ಯಪ್ಪಾ, ಬರುತ್ತಿದ್ದಾನೆ ಯಮಧರ್ಮರಾಜ. 'ಕೃಷ್ಣಾ' ಎಂದು ಹೇಳುತ್ತಲೇ ಗುಳುಂ ನುಂಗಿಬಿಡುವನು. ನೀವೇ ಕ್ರೋ ಪೊಟರೆಯೊಳಕ್ಕೆ ಹೋಗುವುದಿಲ್ಲ. ಅಳಿಯ, ಸ್ವಲ್ಪವೂ ಕದಲಾಡಬೇಡ. ದೇವರಿದ್ದಾನೆ" ಎಂದು ಗಾಬರಿಯಿಂದ ಅಳಿಲು ಮರಿಗಳೊಂದಿಗೆ ಪೊಟರೆಯೊಳಕ್ಕೆ ನುಗ್ಗಿತು.

ಗಗನದಲ್ಲಿ ಗರುಡ ಎರಡು ಸುತ್ತು ಹಾಕಿದ. ಕಬಳಿಸಲು ಏನೂ ಕಾಣಿಸಲಿಲ್ಲ. ಮಾಲಿದ ಮರದ ಬುಡದಲ್ಲಿ ಬಟ್ಟೆ ಚಿಂದಿಯ ಉಂಡೆ ಕಾಣಿಸಿತು. ಅದರಲ್ಲಿ ತನಗೆ ಬೇಕಾದ ಆಹಾರ ವಿರುವುದನ್ನು ಅದಕ್ಕೆ ಗುರುತಿಸಲಾಗಲಿಲ್ಲ. ಗರುಡಪಕ್ಷಿ ಬೇರೆಕಡೆಗೆ ಹಾರಿ ಹೋಯಿತು. ಭಯ ನಿವಾರಣೆಯಾಯಿತು.

ಚಿಟ್ಟೆಲಿ ಬಟ್ಟೆಯನ್ನು ತೊರೆದು ಹೊರಗೆ ಬಂತು. ಪೊಟರೆಯಿಂದ ಅಳಿಲುಗಳೂ ಹೊರಗೆ ಬಂದವು.

"ನಿಮ್ಮ ದಯೆಯಿಂದ ಈಗ ನನ್ನ ಮೈ ಆರಿದೆ. ಪ್ರಾಣವೂ ಉಳಿಯಿತು. ಈ ಹಳೇ ಬಟ್ಟೆ ಯಿಲ್ಲದಿದ್ದರೆ ನಾನೇನಾಗುತ್ತಿದ್ದೆನೋ!

ಇನ್ನು ಹೋಗಿ ಬರುತ್ತೇನೆ. ದಯವಿಟ್ಟು ಪಟೇಲರ ಹೊಲಕ್ಕೆ ದಾರಿ ಹೇಳುವಿರಾ?" ಎಂದಿತು ಚಿಟ್ಟೆಲಿ.

"ಪಟೇಲರ ಹೊಲ ಅಗೋ ಅಲ್ಲಿ ಕಾಣುತ್ತಿರುವ ಜೋಳದ ಹೊಲದ ಪಕ್ಕದಲ್ಲಿದೆ" ಎಂದಿತು ಎಲ್ಲಾ ಬಲ್ಲಕಾಗೆ.

ಚಿಟ್ಟೆಲಿ ಎಲ್ಲರಿಂದಲೂ ಅಪ್ಪಣೆ ಪಡೆದು ಜೋಳದ ಹೊಲವಿರುವಲ್ಲಿಗೆ ಹೊರಟಿತು.

* * *

ಎದುರಿಗೆ ಕಾಣಿಸುತ್ತಿದೆಯೇ ಹೊರತು ಎಷ್ಟು ಹೊತ್ತು ನಡೆದರೂ ಜೋಳದ ಹೊಲ ಸಿಗಲಿಲ್ಲ. ಎಷ್ಟುದೂರ ನಡೆದರೂ ದಾರಿ ಸವೆಯಲಿಲ್ಲ.




ಕಡೆಗೆ ಜೋಳದ ಹೊಲ ಸಿಕ್ಕಿತು. ಅಷ್ಟು ದೊಡ್ಡ ಹೊಲವಿರುವುದೆಂದು ಚಿಟ್ಟೆಲಿಗೆ ತಿಳಿದೇ ಇರಲಿಲ್ಲ. ಅಂತೂ ಜೋಳದ ಹೊಲವನ್ನು ದಾಟಿ ಒಂದುಪಕ್ಕಕ್ಕೆ ತಿರುಗಲು ಒಂದು ಗದ್ದೆಯಲ್ಲಿ ಧಾನ್ಯದ ರಾಶಿ ಕಾಣಿಸಿತು.

ಅದೆಂತಹ ರಾಶಿ! ಅದರಲ್ಲಿ ಎಷ್ಟೋ ಸಹಸ್ರಾರು ಚಿಟ್ಟೆಲಿಗಳು ವಾಸಮಾಡಬಹುದು. ಅವೆಲ್ಲಾ ಎಷ್ಟೋದಿನ ತಿಂದರೂ ಆರಾಶಿ ಮುಗಿಯುವಂತೆ ತೋರುವುದಿಲ್ಲ.

ಆನಂದಾತಿಶಯದಿಂದ ಚಿಟ್ಟೆಲಿ ಆ ರಾಶಿಯ ಮೇಲಕ್ಕೇರಿತು. ನಿಜವಿಷಯವೇನೆಂದರೆ ಆ ರಾಶಿಯೆಲ್ಲಾ ಧಾನ್ಯವಲ್ಲ. ಅದರಲ್ಲಿ ಕಡ್ಡಿ, ಹುಲ್ಲು, ಹೆಂಟೆಗಳೂ ಸಹ ಇದ್ದವು. ಅಲ್ಲಲ್ಲಿ ಧಾನ್ಯವ ತೆನೆಗಳೂ ಇವೆ. ಆ ಸಮಿಾಪದಲ್ಲೇ ಪಟೇಲರ ಕಣಜವಿದೆ. ಆ ಧಾನ್ಯದ ಗೋಜಿಗೆ ಇಲಿ ಮುಂತಾದವು ಬರದಿರಲು, ಪಟೇಲರು ಕೆಲಸಕ್ಕೆಬಾರದ ಹೊಟ್ಟು, ಕಡ್ಡಿ ಕಾಳುಗಳನ್ನು ಗದ್ದೆಯಲ್ಲಿ ರಾಶಿ ಹಾಕಿರುವರು.

ರಾಶಿಯನ್ನು ಸಮಿಾಪಿಸಿ ಚಿಟ್ಟೆಲಿ ಅಕಸ್ಮಾತ್ತಾಗಿ ನಿಂತುಬಿಟ್ಟಿತು. ಏಕೆಂದರೆ, ಅಲ್ಲೊಂದು ಇಲಿ ಕಾಳನ್ನು ಎಣಿಸಿ ಎಣಿಸಿ ಕೊಡುತ್ತಿರುವುದು ಕಾಣಿಸಿತು.

"ಬೇಕೆಂದಿದ್ದರೆ ತಿನ್ನದೆ ಕಾಳನ್ನು ಎಣಿಸುತ್ತಿರುವುದೇಕೇ?" ಎಂದು ಕೇಳಿತು ಚಿಟ್ಟೆಲಿ.

"ಓ, ನೀನೊಬ್ಬ ಹೊಸಬ ಬಂದೆಯಾ? ಹಾಗಾದರೆ ಆಹಾರ ತರುವ ಕೆಲಸ ನಿನ್ನದು. ಹದಿನೇಳು ಜನರಿಗೆ ಆಹಾರ ಬೇಕು. ಬೇಗ ತೆಗೆದುಕೊಂಡು ಬಾ. ನಡಿ" ಎಂದು ಆ

ಇಲಿ ಅವಸರ ಪಡಿಸಿತು. ಚಿಟ್ಟೆಲಿಗೆ ಆಶ್ಚರ್ಯವಾಯಿತು. "ಆಹಾರ ಬೇಕಾದವರು ಬಂದು ತಿನ್ನಲಾರರೇ? ಒಬ್ಬರ ಆಹಾರವನ್ನು ಇನ್ನೊಬ್ಬರು ಹೊತ್ತು ತರುವುದೆಂದರೇನು? ನಾನೆಲ್ಲೂ ಕೇಳಿಲ್ಲ" ಎಂದಿತು ಚಿಟ್ಟೆಲಿ.

"ಹರಟೆ ಸಾಕುಮಾಡು. ಇಲ್ಲಿನ ವ್ಯವಸ್ಥೆಯೇ ಆರೀತಿ. ಹೊಸದಾಗಿ ಬಂದವರು ಹಳಬರಿಗಾಗಿ ಶ್ರಮಿಸಬೇಕು. ಬಿಟ್ಟಿ ಸಿಕ್ಕಿದೆ, ತಿನ್ನೋಣವೆಂದು ಬಂದೆಯಾ, ಹೇಗೆ? ನಮಗೆ ಚಾಕರಿ ಮಾಡಿದರೇನೇ ನಿನಗೆ ತಿಂಡಿ. ಇಲ್ಲವಾದರೆ ಒಂದು ಕಾಳೂ ಮುಟ್ಟುವಂತಿಲ್ಲ."

ಚಿಟ್ಟೆಲಿಗೆ ಇದೊಂದೂ ಸರಿಬೀಳಲಿಲ್ಲ. ಅದು ಹಿಂತಿರುಗಲು ಅನುವಾಯಿತು. ಆದರೆ ಎರಡನೇ ಇಲಿ ಅದರ ಕೈ ಹಿಡಿದುಕೊಂಡಿತು. ಎರಡೂ ಕಿತ್ತಾಡಲು ಪ್ರಾರಂಭಿಸಿದವು. ಇಷ್ಟರಲ್ಲಿ ಅಲ್ಲಿಗೊಂದು ಪಾರಿವಾಳ ಬಂತು. "ಇರಿ, ಇರಿ, ಸುಮ್ಮನಿರಿ. ಏಕೆ ಹೊಡೆದಾಡುವಿರಿ? ಶಾಂತಿಯಿಂದಿರಿ" ಎಂದು ಅದು ಹೇಳಿತು.

ಪಾರಿವಾಳವು, ಚಿಟ್ಟೆಲಿಯನ್ನು ಗುರ್ತಿಸಿ "ನೀನು ಮನೆಬಿಟ್ಟು ಇಷ್ಟುದೂರ ಬಂದುದೇಕೆ?" ಎಂದು ಕೇಳಿತು. "ಇಲ್ಲಿ ಅಪಾರ ಧಾನ್ಯರಾಶಿ ಇದೆ ಎಂದು ಗುಬ್ಬಚ್ಚಿ ಹೇಳಿತು. ಅದರಿಂದ ಬಂದೆ" ಎಂದಿತು ಚಿಟ್ಟೆಲಿ.

"ಎಲೆಹುಚ್ಚಾ, ಆ ಗುಬ್ಬಚ್ಚಿ ಕಥೆ ಕೇಳಿ ಬರುವುದುಂಟೆ? ಇದೆಲ್ಲಾ ಕೆಲಸಕ್ಕೆ ಬಾರದ ಧಾನ್ಯ. ನೀನು ಕಷ್ಟಪಟ್ಟು ತಂದು ತಿನ್ನುವ ಧಾನ್ಯದೊಂದಿಗೆ ಹೋಲಿಸಿದರೆ ಇದೇನು ಮಹಾ! ಬರೀಹೊಟ್ಟು. ಇದಕ್ಕಾಗಿ ಇಲಿಗಳಿಗೆಲ್ಲಾ ಪುಗಸಟ್ಟೆ ಚಾಕರಿ ಮಾಡುವೆಯಾ? ನಾನು ನಮ್ಮ ಸ್ಥಳದಕಡೆ ಹೋಗುತ್ತಿರುವೆನು. ಬೇಕಾದರೆ ನನ್ನ ಬೆನ್ನಿನ ಮೇಲೇರಿ ಕುಳಿತುಕೋ. ಎತ್ತಿಕೊಂಡು ಹೋಗುತ್ತೇನೆ" ಎಂದಿತು ಪಾರಿವಾಳ.

ಚಿಟ್ಟೆಲಿ ತನ್ನ ಮನೆಗೆ ವಾಪಸಾಯಿತು. ದೂರದ ಬೆಟ್ಟ ನುಣ್ಣಗೆ ಇರುವುದೆಂತಲೂ ತನ್ನ ಮನೆಯಂತಹುದು ಪ್ರಪಂಚದಲ್ಲೇ ಇಲ್ಲವೆಂತಲೂ ಚಿಟ್ಟೆಲಿ ಆಗ ಅರಿತುಕೊಂಡಿತು. ಸ್ವಲ್ಪ ಕಷ್ಟಪಟ್ಟು ದುಡಿದರೇನೇ ಸುಖ ಎಂಬುದನ್ನು ತಿಳಿದುಕೊಂಡು ತನ್ನ ಮನೆಯಲ್ಲಿ ಹಾಯಾಗಿ ಬಾಳ ತೊಡಗಿತು.



# ಮುಖಚಿತ್ರ

ಅರಣ್ಯವಾಸದಲ್ಲಿರುವ ಧರ್ಮರಾಯಾದಿಗಳಿಗೆ ಅಕೃತವರ್ಣನೆಂಬ ಋಷಿ ಪರಶು-ರಾಮನ ಚರಿತ್ರೆಯನ್ನು ವಿವರಿಸಿದನು. ಈ ಕಥೆ ಜಮದಗ್ನಿಯ ಕೋಪದ ದುಷ್ಪರಿಣಾಮವನ್ನೂ, ಪರಶುರಾಮನ ಪಿತೃಮಾತೃ ಭಕ್ತಿಯನ್ನೂ ತೋರಿಸುವಂತಹುದು:

ಪೂರ್ವಕಾಲದಲ್ಲಿ ಜಮದಗ್ನಿ ಎಂಬ ಋಷಿ ಇದ್ದ. ಆತನು ಸಾಂಗವಾಗಿ ವೇದಾಧ್ಯಯನ ಮಾಡಿದ್ದ; ಬಹು ತೇಜಸ್ವಿಯಾಗಿದ್ದ. ಪ್ರಸೇನಜಿತ್ ಮಹಾರಾಜನ ಕುಮಾರಿ ರೇಣುಕಾದೇವಿ ಆತನ ಪತ್ನಿಯಾಗಿದ್ದಳು. ಈ ದಂಪತಿಗಳಿಗೆ ರುಮಣ್ವಂತ, ಸುಷೇಣ, ವಸು, ವಿಶ್ವಾವಸು, ಪರಶುರಾಮ ಎಂಬ ಐವರು ಪುತ್ರರಿದ್ದರು.

ರೇಣುಕಾ ಪ್ರತಿದಿನವೂ ಸರೋವರದಿಂದ ನೀರು ತರುತಿದ್ದಳು. ಒಂದು ದಿನ ಇವಳು ನೀರಿಗೆ ಹೋಗಿದ್ದಾಗ ಚಿತ್ರರಥನೆಂಬ ಗಂಧರ್ವನು ತನ್ನ ಹೆಂಡತಿಯರೊಂದಿಗೆ ಜಲಕ್ರೀಡೆಯಾಡಿ ಆಕಾಶದಲ್ಲಿ ವಿಹರಿಸುತ್ತಿದ್ದ. ರೇಣುಕೆ ಅವರ ಪ್ರತಿಬಿಂಬವನ್ನು ನೋಡುತ್ತಾ ಮನೆಯ ಕೆಲಸವನ್ನು ಮರೆತು ಬಹಳವೇಳೆ ಕಳೆದುಬಿಟ್ಟಳು.

ನಂತರ ನೀರು ತೆಗೆದುಕೊಂಡು ಮನೆಗೆ ಬಂದಳು. ಆಗ ಜಮದಗ್ನಿ ಕೋಪಾವಿಷ್ಟನಾಗಿದ್ದ. ರೇಣುಕಾ ಇಷ್ಟು ತಡಮಾಡಿಬರಲು ಕಾರಣವೇನೆಂಬುದನ್ನು ಅವನು ದಿವ್ಯದೃಷ್ಟಿಯಿಂದ ತಿಳಿದುಕೊಂಡಿದ್ದ.

ಜಮದಗ್ನಿಯ ಕೋಪವೆಂದರೆ ಕೇಳುವುದೇಬೇಡ. ಅವನು ತನ್ನ ಮಕ್ಕಳನ್ನು ಕರೆದು "ಕರ್ತವ್ಯವನ್ನು ಮರೆತ ನಿಮ್ಮ ತಾಯಿಯನ್ನು ಕೊಲ್ಲಿರಿ!" ಎಂದು ಕಠಿನಾಜ್ಞೆಮಾಡಿಬಿಟ್ಟ. ಆಗ ಪರಶುರಾಮ ಮನೆಯಲ್ಲಿರಲಿಲ್ಲ. ಹಿರಿಯವರಾದ ನಾಲ್ವರೂ "ಶಿವಶಿವ" ಎಂದು ಕಿವಿ ಮುಚ್ಚಿಕೊಂಡು ದೂರಹೋದರು. "ತಂದೆಯ ಮಾತು ಕೇಳದ ನೀವು ಮೃಗಗಳಾಗಿರಿ" ಎಂದು ಶಪಿಸಿದನು ಜಮದಗ್ನಿ!

ಸ್ವಲ್ಪಹೊತ್ತಿಗೆ ಪರಶುರಾಮನು ಬಂದ. ತಂದೆ ಅವನಿಗೂ ಅದೇರೀತಿ ಅಜ್ಞೆ ಮಾಡಿದ. ಪರಶುರಾಮನು ತಂದೆಯ ಆಜ್ಞೆಯನ್ನು ಕೇಳುತ್ತಲೇ ತಾಯಿಯ ಕುತ್ತಿಗೆಯನ್ನು ಕಡಿದುಹಾಕಿದನು. ಅವನ ಪಿತೃಭಕ್ತಿಗೆ ಮೆಚ್ಚಿದ ಜಮದಗ್ನಿ— "ಮಗು, ನಿನಗೇನು ವರಬೇಕು ಕೇಳು" ಎಂದ.

ಕೂಡಲೇ ಬುದ್ಧಿವಂತನಾದ ಪರಶುರಾಮ—'ತಂದೆಯೇ, ನನ್ನ ತಾಯಿಯನ್ನು ಬದುಕಿಸಿ, ಅವಳ ದೋಷವನ್ನು ಮನ್ನಿಸಿ ಕಾಪಾಡು. ಅಣ್ಣಂದಿರ ಶಾಪವನ್ನು ವಿಮೋಚನೆ ಮಾಡು" ಎಂದು ವರ ಕೇಳಿದನು.

ಜಮದಗ್ನಿ ಇನ್ನಷ್ಟು ಮೆಚ್ಚಿ ಪರಶುರಾಮನ ಅಭೀಷ್ಟವನ್ನು ಈಡೇರಿಸಿದನು.




ಮಹಾರಾಷ್ಟ್ರದೇಶದ ಇಂದೂರು ಸಂಸ್ಥಾನವನ್ನು ರಾಣಿ ಅಹಲ್ಯಾಬಾಯಿ ಪರಿಪಾಲನೆ ಮಾಡುತ್ತಿದಾಗ ವಿನಾಯಕರಾವ್ ಗಂಧೇಕರ್ ಎಂಬ ಸಂಗೀತ ವಿದ್ವಾಂಸನಿದ್ದನು. ಆತನು ಪ್ರತಿಭಾವಂತನಾದ ಕವಿ. ಮಹಾ ಭಕ್ತ. ಆತನು ಭಕ್ತಿರಸಪ್ರಧಾನವಾದ ಕೀರ್ತನೆಗಳನ್ನು ರಚಿಸಿ, ಹಾಡಿ ಜನರನ್ನು ಸಂತೋಷಗೊಳಿಸುತ್ತಿದ್ದ.

ಗಂಧೇಕರನ ಕೀರ್ತಿಲತೆ ನಾಲ್ಕು ದಿಕ್ಕುಗಳಲ್ಲೂ ವ್ಯಾಪಿಸಿತು. ಪ್ರತಿನಿತ್ಯ ಅನೇಕ ಜನ ಭಕ್ತರೂ, ಸಂಗೀತಾಭಿಮಾನಿಗಳೂ ಧನಿಕರೂ ಜಮೀನುದಾರರೂ ಬಂದು ಅವನಿಗೆ ಕಾಣಿಕೆಗಳನ್ನು ಸಲ್ಲಿಸಿ ಹೋಗುತ್ತಿದ್ದರು. ಹೀಗೆ ಬಂದ ಹಣದಿಂದ ಗಂಧೇಕರ್ ಬಡಬಗ್ಗರಿಗೆ, ಸಂತರ್ಪಣೆ ಮಾಡಿಸುತ್ತಿದ್ದನು. ಈರೀತಿ ಬಂದಷ್ಟು ಹಣವೂ ಖರ್ಚಾಗಿಬಿಡುತಿತ್ತು. ಖರ್ಚು ಮಾಡಿದಷ್ಟೂ ಎಲ್ಲಿಂದಲೋ ಮತ್ತೆ ಹಣ ಬಂದು ಸೇರುವುದು! ಸಂತಾನವಿಲ್ಲವೆಂಬ ಕೊರತೆ ಹೊರತು ಗಂಧೇಕರನ ಜೀವನದಲ್ಲಿ ಯಾವೊಂದು ಲೋಪವೂ ಇರಲಿಲ್ಲ. ಕೊನೆಗೆ ಆತನು ಮಕ್ಕಳಿಲ್ಲದೆಯೇ ತನ್ನ ಇಷ್ಟದೇವನಾದ ಪಾಂಡುರಂಗನಲ್ಲಿ ಐಕ್ಯನಾದನು. ಮರಣಿಸುವ ಮುನ್ನ ಆತನು ತನ್ನ ಹೆಂಡತಿ ರುಕ್ಮಾಬಾಯಿಯನ್ನು ಕರೆದು ಹೀಗೆಂದು ಹೇಳಿದ :

"ರುಕ್ಮಾ, ನಮಗೆ ಮಕ್ಕಳಿಲ್ಲ. ಆದರೆ ಮಾನವರಿಗೆ ಮಕ್ಕಳು ಮಾತ್ರವೇ ಸಂತಾನವಲ್ಲ. ಆದುದರಿಂದ ನನ್ನ ಅನಂತರ ನಮ್ಮಲ್ಲಿರುವ ಹಣದಿಂದ ಕೆರೆ, ಭಾವಿ, ದೇವಾಲಯ, ಧರ್ಮಛತ್ರ ಮುಂತಾದುವನ್ನು ಕಟ್ಟಿಸು. ಇದೇ ನನ್ನ ಅಂತ್ಯಕೋರಿಕೆ."

ರುಕ್ಮಾಬಾಯಿ ಅದೇರೀತಿ ಧಾನಧರ್ಮ ಮಾಡಲು ನಿಶ್ಚಯಿಸಿಕೊಂಡಳು. ಆದರೆ ಒಂದು ದಿನ ಇಂದೂರು ಸಂಸ್ಥಾನದ ಸೇನಾಧಿಪತಿ ತುಕಾಜಿ ತನ್ನ ಭಟರೊಂದಿಗೆ ಬಂದು "ಗಂಧೇಕರನು ಮಕ್ಕಳಿಲ್ಲದೆ ಸತ್ತುಹೋದನಾದುದರಿಂದ ಕಾನೂನುಪ್ರಕಾರ ಆತನ ಹಣವೆಲ್ಲವೂ ಆಸ್ಥಾನಕ್ಕೆ ಒಪ್ಪಿಸಬೇಕು"

ಆರ್. ಸುಬ್ಬರಾಯ

ಎಂದು ಹೇಳಿದುದುಮಾತ್ರವೇ ಅಲ್ಲದೆ "ನಿಮ್ಮ ಜೀವನಕ್ಕೆ ಸಾಕಾಗುವಷ್ಟು ಹಣವನ್ನು ಅದರಲ್ಲಿ ತೆಗೆದುಕೊಳ್ಳಿ" ಎಂದು ಸಲಹೆಕೊಟ್ಟ ರುಕ್ಮಾಬಾಯಿಗೆ.

ರುಕ್ಮಾಬಾಯಿ ತನ್ನ ಗಂಡನ ಅಂತಿಮ ಕೋರಿಕೆಯನ್ನು ವಿವರಿಸಿ ಹೇಳಿದಳು. ಆದರೆ ಕಾನೂನು ಆ ರೀತಿಯಿರುವಾಗ ತುಕಾಜಿ ತಾನೇ ಏನು ಮಾಡಬಲ್ಲನು? ಗಂಧೇಕರನ ಸರ್ವಸಂಪತ್ತನ್ನೂ ತೆಗೆದುಕೊಂಡು ಹೋಗಿ ರಾಣಿಯವರ ಖಜಾನೆಗೆ ಸೇರಿಸಿದನು. ರುಕ್ಮಾಬಾಯಿ ರಾಣಿ ಅಹಲ್ಯಾಬಾಯಿಗೆ ಒಂದು ಅರ್ಜಿ ಹಾಕಿಕೊಂಡಳು. ರಾಣಿಯವರ ದರ್ಬಾರಿಗೆ ಹೋಗಿ ಆ ಧನವನ್ನು ತನಗೆ ಮತ್ತೆ ಕೊಡಿಸಿಕೊಡಬೇಕೆಂತಲೂ, ಆ ಹಣವನ್ನು ತನ್ನ ಗಂಡನ ಕೋರಿಕೆಯ ಪ್ರಕಾರ ಕೆರೆ, ಭಾವಿ, ದೇವಾಲಯ ಮುಂತಾದುವುಗಳನ್ನು ಕಟ್ಟಿಸುವೆನೆಂತಲೂ ಹೇಳಿದಳು.

ರಾಣಿ ಅಹಲ್ಯಾಬಾಯಿ ರುಕ್ಮಾಬಾಯಿ ಹೇಳಿದುದನ್ನೆಲ್ಲಾ ಶಾಂತವಾಗಿ ಕೇಳಿ, ಗಂಧೇಕರನ ಮನೆಯಿಂದ ತಂದ ಸಕಲ ಸಂಪತ್ತನ್ನೂ ರುಕ್ಮಾಬಾಯಿಗೆ ಹಿಂತಿರುಗಿಸಬೇಕೆಂದು ತುಕಾಜಿಗೆ ಆಜ್ಞೆಮಾಡಿದಳು. ತುಕ್ಕಾಜಿ ನಿರ್ಘಾಂತನಾಗಿ "ದೇವಿ, ಇದು ಕಾನೂನಿಗೆ ವಿರುದ್ಧ" ಎಂದ.

"ಆ ಹಣದಿಂದ ನಾವೇನು ಮಾಡುವೆವು?" ಎಂದು ರಾಣಿ ತುಕಾಜಿಯನ್ನು ಕೇಳಿದಳು.

"ಕೆರೆ, ಛತ್ರ, ಭಾವಿಗಳನ್ನು ನಿರ್ಮಿಸುವೆವ; ಪ್ರಜೆಗಳಿಗೆ ಸೌಕರ್ಯಗಳನ್ನು ಕಲ್ಪಿಸುವೆವು" ಎಂದ ತುಕಾಜಿ.

"ಸರಿ, ಒಪ್ಪಿದೆ. ರೂಕ್ಮಾಬಾಯಿಯೂ ಸಹ ಈ ಹಣವನ್ನು ಅದಕ್ಕಾಗಿಯೇ ವಿನಿಯೋಗಿಸುವಳು. ಇದರಲ್ಲಿ ಒಂದೇ ಒಂದು ವ್ಯತ್ಯಾಸ ಕಂಡುಬರುತ್ತೆ. ಅದೇನೆಂದರೆ ನಮ್ಮ ಅಧಿಕಾರಿಗಳು ಕೇವಲ ಸಂಬಳಕ್ಕಾಗಿ ಕೆಲಸ ಮಾಡುವರು. ಈಕೆ ಆರೀತಿ ಅಲ್ಲ. ತನ್ನ ಪತಿಯ ಮೇಲಿನ ಭಕ್ತಿಯಿಂದ ತಾನಾಗಿ ಮಾಡಿಸುವಳು. ಇದರಲ್ಲಿ ಒಂದು ಕವಡೆಯನ್ನಾದರೂ ತೆಗೆದುಕೊಳ್ಳುವುದಿಲ್ಲ. ಆದುದರಿಂದ ಹಣವನ್ನು ಕೂಡಲೇ ಕೊಡಿಸು" ಎಂದು ಆಜ್ಞಾಪಿಸಿದಳು ರಾಣಿ.






# ಅತಿಯಾಸೆ

ಆರುನೂರು ವರ್ಷಗಳ ಹಿಂದೆ ಓರಗಲ್ಲು ಪಟ್ಟಣದ ಸಮೀಪದಲ್ಲಿ ವರಹಗಿರಿ ಎಂಬ ಸಣ್ಣದೊಂದು ಹಳ್ಳಿಯಿತ್ತು. ಆ ಗ್ರಾಮದಲ್ಲಿ ಒಬ್ಬ ಕಮ್ಮಾರನಿದ್ದನು. ಅವನು ಕಡು ಬಡವ. ಚಿಕ್ಕಂದಿನಿಂದಲೂ ಅದೇ ಕಸಬು ಮಾಡುತ್ತಿದ್ದನಾದರೂ ಗಂಟೇನೂ ಮಾಡಿರಲಿಲ್ಲ. ತನ್ನ ನಿರ್ಗತಿಕ ಸ್ಥಿತಿಯನ್ನು ಕುರಿತು ಆಲೋಚಿಸಿದಾಗಲೆಲ್ಲಾ ಕಮ್ಮಾರನಿಗೆ ಭಯವಾಗುತಿತ್ತು. 'ಮುದುಕನಾಗುತ್ತಿರುವೆನು. ದುಡಿಯಲಾರದ ದುಸ್ಥಿತಿ ಬಂದಾಗ ಹೇಗೆ ತಾನೇ ಜೀವಿಸುವುದು?' ಎಂದು ಅನೇಕವೇಳೆ ಚಿಂತಿಸುವನು.

ಒಂದು ದಿನ ಈರೀತಿ ಯೋಚಿಸುತ್ತಾ ಆತನು ಓರಗಲ್ಲಿಗೆ ಕೆಲಸದಮೇಲೆ ಹೊರಟ. ಭುಜದಮೇಲೆ ಬುತ್ತಿಯ ಮೂಟೆ, ಕೈಯಲ್ಲಿ ಸೊಟ್ಟ ತುಂಡು ಕೋಲು ಹಿಡಿದು ಓರಗಲ್ಲನ್ನು ಸಮೀಪಿಸುತ್ತಿದ್ದ. ಅಲ್ಲಿ ಒಂದು ಸೇತುವೆಯನ್ನು ದಾಟಬೇಕಿತ್ತು.

ಅದೇ ಸಮಯದಲ್ಲಿ ಸೇತುವೆಯ ಆಕಡೆಯಿಂದ ಬರುತ್ತಿದ್ದ ಒಬ್ಬ ಪಂಡಿತನು ಕಾಣಿಸಿದ. ಕಮ್ಮಾರನ ಕೈಯಲ್ಲಿದ್ದ ಕೊಂಕರು ಕೋಲನ್ನು ನೋಡಿ ಆಶ್ಚರ್ಯಗೊಂಡ. ಅದನ್ನು ವ್ಯಕ್ತಮಾಡದೆ "ನಿಮ್ಮದು ಯಾವ ಊರು?" ಎಂದು ಕೇಳಿದ ನಗುತ್ತಾ. ಕಮ್ಮಾರನು ತನ್ನ ವಾಸಸ್ಥಳವನ್ನು ತಿಳಿಸಿದ.

ಪಂಡಿತನು ತುಸ ಸಂದೇಹಿಸುತ್ತಾ ಕಮ್ಮಾರನ ಕೈಯಲ್ಲಿದ್ದ ತುಂಡುಗೋಲನ್ನು ತೆಗೆದುಕೊಂಡು ಸೂಕ್ಷ್ಮವಾಗಿ ಪರೀಕ್ಷಿಸಿದನು. ಪಂಡಿತನ ವರ್ತನೆಯಿಂದ ಕಮ್ಮಾರನಿಗೆ ಆಶ್ಚರ್ಯವಾಯಿತು. 'ತಾನು ಹತ್ತು ಹದಿನೈದು ವರ್ಷಗಳಿಂದ ಹಿಡಿದುಕೊಂಡು ತಿರುಗುತ್ತಿದ್ದ ಕೋಲನ್ನು ವಿದ್ಯಾವಂತನಾದ ಈತನೇಕೆ ಆಶ್ಚರ್ಯ ಚಕಿತನಾಗಿ ನೋಡುತ್ತಿದ್ದಾನೆ' ಎಂದುಕೊಂಡ ಕಮ್ಮಾರ.

ಪಂಡಿತನು ಆ ಕೋಲನ್ನು ಕಮ್ಮಾರನಿಗೆ ವಾಪಸು ಮಾಡುತ್ತಾ "ಎಲೈ ಅಜ್ಜ, ನೀನು ಯಾರೋ, ಎಂತಹವನೋ ನನಗೆ ತಿಳಿಯದು ಆದರೂ ನಮ್ಮಿಬ್ಬರಿಗೂ ಶುಭವಾಗುವ ಒಂದು ರಹಸ್ಯವನ್ನು ತಿಳಿಸುವೆನು. ನಾನು

ಟಿ. ಮೋನಪ್ಪಶೆಟ್ಟಿ

ಹೇಳಿದಂತೆ ಮಾಡಿದೆಯಾದರೆ ನಾವಿಬ್ಬರೂ ಲಕ್ಷಾಧೀಶ್ವರ ರಾಗಬಹುದು" ಎಂದ.

ಕಮ್ಮಾರನಿಗೆ ಪಂಡಿತನ ಮಾತು ಒಂದಿನಿತೂ ಅರ್ಥವಾಗಲಿಲ್ಲ. ತನ್ನ ಕೈಯಲ್ಲಿರುವ ಬಿಳಿನೇರಳೆ ಸೊಟ್ಟ ಕೋಲಿನಲ್ಲಿ ಲಕ್ಷಾಂತರ ಬೆಲೆ ಬಾಳುವ ಮಹತ್ವವೇನಿದೆಯೋ ಏನೋ ಆತನಿಗೆ ತಿಳಿಯಲಿಲ್ಲ.

"ನೀವು ಹೇಳುವುದೊಂದೂ ನನಗೆ ಅರ್ಥವಾಗಲಿಲ್ಲ. ನಮ್ಮ ಹಳ್ಳಿ ಪಕ್ಕದಲ್ಲಿರುವ ಹೊಳೆಯ ತೀರದಲ್ಲಿ ಬಿಳಿಯ ನೇರಳೆ ಮರವೊಂದಿದೆ. ಅದರ ತುಂಡು ಇದು. ಒಂದಾಣೆ ಕೊಟ್ಟರೆ ನಮ್ಮ ಹಳ್ಳಿಯ ಯಾವ ಹುಡುಗನಾದರೂ ಇನ್ನೂ ಉತ್ತಮವಾದ ಕೋಲನ್ನು ಕತ್ತರಿಸಿ ಕೊಡುತ್ತಾನೆ" ಎಂದ ಕಮ್ಮಾರ.

ಆಗ ಪಂಡಿತನು ಕಮ್ಮಾರನ ಕೈ ಹಿಡಿದು ಪಕ್ಕಕ್ಕೆ ಕರೆದುಕೊಂಡು ಹೋಗಿ "ಅಜ್ಜ, ನಾನು ಈ ಓರಗಲ್ಲು ಪಟ್ಟಣದ ಶಾಲೆಯಲ್ಲಿ ಒಬ್ಬ ಉಪಾಧ್ಯಾಯನು. ಈ ಕೋಲನ್ನು ಯಾವ ಮರದಿಂದ ಕಡಿದಿರುವೆಯೋ ಆ ಮರದ ಗುರುತು ನಿನಗೆ ಈಗ ಇದ್ದರೆ ನಾವು ನಿಜವಾಗಿ ಅದೃಷ್ಟವಂತರೆಂದು ಹೇಳಬೇಕು. ಬಿಳಿ ನೇರಳೆ ಮರಗಳು ಈ ಪ್ರಾಂತ್ಯದಲ್ಲಿಲ್ಲ. ಹೊಳೆಯ ಪಕ್ಕದಲ್ಲಿರುವ ಬಿಳಿನೇರಳೆ ಎಂದು ಹೇಳಲು ನನಗೆ ಒಂದು ರಹಸ್ಯ ಜ್ಞಾಪಕಕ್ಕೆ ಬಂತು. ಆ ಮರದ ಬುಡದಲ್ಲಿ ಅಕ್ರಂಖಾನ್ ತನ್ನ ಹಣವನ್ನೆಲ್ಲಾ ಹೂತಿರುವನಂತೆ. ಗುಟ್ಟು ಹೊರಬೀಳದಂತೆ ಆ ಧನದರಾಶಿಯಲ್ಲಿ ನಾವು




ಹೊರಬಹುದಾದಷ್ಟನ್ನು ಸಾಗಿಸಿಕೊಂಡು ಹೋಗಿ ಅನುಭವಿಸಬಹುದು" ಎಂದ.

'ಅಕ್ರಂಖಾ ಹಣ' ಎಂಬ ಮಾತುಗಳು ಕಿವಿಗೆ ಬಿದ್ದಕೂಡಲೇ ಕಮ್ಮಾರನಿಗೆ ತಾನು ಚಿಕ್ಕಂದಿನಲ್ಲಿ ಕೇಳಿದ ಕಥೆಗಳು ನೆನಪಿಗೆ ಬಂದವು. ಅಕ್ರಂಖಾ ಆಗ್ಗೆ ನೂರು ವರ್ಷಗಳ ಹಿಂದೆ ಆ ಪ್ರಾಂತ್ಯದಲ್ಲಿ ಭಾರಿ ದರೋಡೆಕಾರನೆಂದು ಪ್ರಸಿದ್ಧನಾಗಿದ್ದ. ಅಂದಿನ ಅರಾಜಕ ಸ್ಥಿತಿಯಲ್ಲಿ ಅವನು ಊರುಗಳನ್ನೇ ದೋಚುತಿದ್ದ, ಕೊಳ್ಳೇ ಹೊಡೆಯುತ್ತಿದ್ದ. ಆ ಹಣವನ್ನೆಲ್ಲಾ ಎಲ್ಲಿಯೋ ಬಚ್ಚಿಟ್ಟಿರುವನೆಂದು ಅನೇಕಮಂದಿ ನಂಬಿದ್ದರು.

ಕಮ್ಮಾರನಿಗೆ ಈ ವಿಷಯದ ನೆನಪಾಯಿತು. ಪಂಡಿತನು ಹೇಳಿದ್ದರಲ್ಲಿ ಸತ್ಯವಿರ



ಬೇಕೆಂದು ತೋರಿತು. ಈ ರೀತಿಯಾದರೂ ತನ್ನ ಬಡತನ ತೊಲಗಿ ಭಾಗ್ಯವಂತನಾಗ ಬಹುದಲ್ಲಾ ಎಂಬ ಆಶೆ ಅಂಕುರಿಸಿತು. ಪಂಡಿತನಿಗೆ ಬಿಳಿನೇರಳೆ ಮರವನ್ನು ತೋರಿಸಲು ಒಪ್ಪಿಕೊಂಡ. ಅವರಿಬ್ಬರೂ ಸೂರ್ಯನು ಮುಳುಗುವ ವೇಳೆಗೆ ವರಹಗಿರಿ ಪಕ್ಕದ ಹೊಳೆಯ ಬಳಿಗೆ ಬಂದರು. ಹೊಳೆಯ ಅಂಚಿನಲ್ಲಿ ಬಿಳಿ ನೇರಳೆಮರ ಕಾಣಿಸಿತು.

ಚೆನ್ನಾಗಿ ಕತ್ತಲಾಗುವತನಕ ಕಾದಿದ್ದು, ಕಮ್ಮಾರನು ಮನೆಗೆ ಹೋಗಿ ತಂದ ಹಾರೆ ಗುದ್ದಲಿಗಳಿಂದ ಮರದ ಬುಡದಲ್ಲಿ ಅಗೆಯ ತೊಡಗಿದರು. ಸುಮಾರು ಒಂದೆರಡಡಿ ಆಳ ಅಗೆಯಲು ಅವರಿಗೆ ಭಾರಿ ಬಂಡೆಯೊಂದು ಕಾಣಿಸಿತು. ಇಬ್ಬರೂ ತಮ್ಮ ಶಕ್ತಿಯನ್ನೆಲ್ಲಾ ಉಪಯೋಗಿಸಿ ಅದನ್ನೆತ್ತಿ ಪಕ್ಕದಲ್ಲಿಟ್ಟರು. ಆ ಬಂಡೆ ಕೆಳಗೆ ಅವರಿಗೆ ಭಾರಿ ಸುರಂಗ ಕಾಣಿಸಿತು. ಪಂಜು ಹೊತ್ತಿಸಿಕೊಂಡು ಇಬ್ಬರೂ ಆ ಸುರಂಗದಲ್ಲಿ ಕೊಂಚದೂರ ನಡೆದರು. ಒಂದೆಡೆಯಲ್ಲಿ ನೇತಾಡುತ್ತಿದ್ದ ದೊಡ್ಡ ಗಂಟೆ ಕಾಣಿಸಿತು. ಅಲ್ಲೇ ನೆಲದ ಮೇಲೆ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದ ನಗ ನಾಣ್ಯಗಳು ಕಂಗೊಳಿಸಿದವು. ಒಂದೇ ಸಾರಿ ಅಷ್ಟೊಂದು ಧನ ಕಾಣಿಸಲು ಕಮ್ಮಾರನಿಗೆ ಆಶೆ ಅತಿಯಾಯಿತು. ಅಲ್ಲಿ ಇಲ್ಲಿ ಓಡಾಡಿ ತಾನು ತಂದಿದ್ದ ಗೋಣಿ ಚೀಲದಲ್ಲಿ ಬಂಗಾರದ ನಾಣ್ಯ, ನಗಗಳನ್ನು ತುಂಬಿಕೊಳ್ಳ ತೊಡಗಿದನು. ಆ ಅಡಾವುಡಿಯಲ್ಲಿ ಕಮ್ಮಾರನ ತಲೆ ಮೇಲೆ ನೇತಾಡುತ್ತಿದ್ದ ಗಂಟೆಗೆ ತಗುಲಿ 'ಟಣ್' ಎಂದು ಸದ್ದಾಯಿತು. ಆ ಕೂಡಲೇ ಗೋಡೆ ಪಕ್ಕದ ನೆರಳಿನಲ್ಲಿದ್ದ ಭಯಂಕರಾಕಾರನು ಕಣ್ಣುಗಳನ್ನು ಉಜ್ಜಿಕೊಳ್ಳುತ್ತಾ "ಇದು ರಾತ್ರಿಯೋ, ಹಗಲೋ" ಎಂದು ಗಟ್ಟಿಯಾಗಿ ಘರ್ಜಿಸಿದನು.

"ಇದು ಹಗಲು, ಇನ್ನೂ ರಾತ್ರಿಯಾಗಿಲ್ಲ" ಎಂದು ತಡಬಡಿಸದೆ ಪಂಡಿತನು ಜವಾಬು ಕೊಟ್ಟ. ಮರುಕ್ಷಣವೇ ಆ ಭಯಂಕರಾಕಾರನು ಗೋಡೆಗೆ ಒರಗಿ ನಿದ್ದೆ ಮಾಡಲು ಪ್ರಾರಂಭಿಸಿದ.

ಇದೆಲ್ಲವನ್ನು ಕಂಡು ಕಮ್ಮಾರನು ಭಯಕಂಪಿತನಾದ. ಈ ಸುರಂಗದಲ್ಲಿರುವ ಧನರಾಶಿಗೆ ಒಬ್ಬಾತನು ಕಾವಲಿರುವನೆಂದು ಅವ

ರಿಗೆ ಆಗ ತಿಳಿಯಿತು. "ಇವನು ಯಾರು? ಕೆಂಡಕಾರುವ ಕಣ್ಣು, ಕೈಯಲ್ಲಿರುವ ಖಡ್ಗ, ನೋಡಿದರೆ ಭಯವಾಗುತ್ತದೆ" ಎಂದು ಕೇಳಿದ ಕಮ್ಮಾರ. ಅದಕ್ಕೆ ಪಂಡಿತನು, "ನೀನೇನೂ ಭಯಪಡಬೇಡ. ಆ ಗಂಟೆಯ ಗೋಜಿಗೆ ಹೋಗದೆ ನಿನಗೆ ಬೇಕಾದಷ್ಟು ಬೆಳ್ಳಿ ಬಂಗಾರವನ್ನು ತುಂಬಿಕೋ. ನಾನು ಅಕಸ್ಮಾತ್ತಾಗಿ ಆ ಗಂಟೆಯನ್ನು ಕದಲಿಸಿದರೆ ನಾನು ಈಗ ಕೊಟ್ಟ ಜವಾಬನ್ನೇ ಕೊಡು" ಎಂದ. ಯಾವಪ್ರಮಾದವೂ ಇಲ್ಲದೆ ಇಬ್ಬರೂ ತಮ್ಮೊಂದಿಗೆ ತಂದಿದ್ದ ಚೀಲಗಳಲ್ಲಿ ಬೆಳ್ಳಿ ಬಂಗಾರವನ್ನು ತುಂಬಿಕೊಂಡು ಸುರಂಗದಿಂದ ಹೊರಬಿದ್ದರು. ಮರದ ಬುಡದಲ್ಲಿ ಅಗೆದು ತೆಗೆದಿದ್ದ ಬಂಡೆಯನ್ನು ಮೊದಲಿದ್ದಂತೆ ಜೋಡಿಸಿ ಮುಚ್ಚಿದರು. ಪಂಡಿತನು ಓರಗಲ್ಲಿಗೂ, ಕಮ್ಮಾರನು ತನ್ನ ಮನೆಗೂ ತಮ್ಮ ತಮ್ಮ ಮೂಟೆಗಳೊಂದಿಗೆ ಹಿಂತಿರುಗಿದರು.

ನಾಲ್ಕೈದು ತಿಂಗಳು ಉರುಳಿತು. ಕಮ್ಮಾರನು ತಾನು ತಂದಿದ್ದ ಹಣದಿಂದ ಭಾರಿ ಭವನವನ್ನು ಕಟ್ಟಿಸಿದ. ಸೇವಕರನ್ನು ನೇಮಿಸಿದ. ಸರ್ವ ಸುಖಗಳನ್ನೂ ಅನುಭವಿಸುತ್ತಿದ್ದ.

ಆದರೂ ಅವನಿಗೆ ತೃಪ್ತಿಯಿಲ್ಲ. "ಎಷ್ಟು ಹಣವಿದ್ದರೇನು?" ಓರಗಲ್ಲು ಪ್ರಭುವಿನ ಹತ್ತಿರ ಇರುವ ಹಣದಮುಂದೆ ನನ್ನ ಐಶ್ವರ್ಯ ಯಾವ ಮೂಲೆಗೆ! ಆತನಿಗಿರುವ ಅಧಿಕಾರ ನನಗೆಲ್ಲಿದೆ?" ಎಂದುಕೊಳ್ಳುತ್ತಿದ್ದ. ಕಾಲಕ್ರಮೇಣ ಕಮ್ಮಾರನಿಗೆ ದುರಾಲೋಚನೆಗಳು ಅಧಿಕವಾದುವು. ಅಕ್ರಂಖಾ ಖಜಾನೆಯಲ್ಲಿ ಉಳಿದಿದ್ದ ಬೆಳ್ಳಿ ಬಂಗಾರವನ್ನೆಲ್ಲಾ ತನ್ನ ಮನೆಗೆ ಸಾಗಿಸಬೇಕೆಂದು ನಿರ್ಧರಿಸಿದ. ಒಂದು ರಾತ್ರಿ ಹಾರೆಗುದ್ದಲಿಗಳನ್ನು ತೆಗೆದುಕೊಂಡು ಆ ಪ್ರದೇಶಕ್ಕೆ ಹೊರಟ. ಮರದ ಬುಡದಲ್ಲಿ ಅಗೆದು ಬಂಡೆಯನ್ನು ಪಕ್ಕಕ್ಕೆ ಜರುಗಿಸಿ ಸುರಂಗದಲ್ಲಿ ಇಳಿದನು. ಗುಂಡಿಗೆ ಭೀತಿಯಿಂದ ಹೊಡೆದುಕೊಳ್ಳುತ್ತಿದ್ದರೂ ದುರಾಶೆಯಿಂದ ಅವನು ಸುರಂಗದಲ್ಲಿ ಮುಂದುವರಿದ. ಈಸಲ ಅವನು ಒಂಟಿಯಾಗಿದ್ದ. ಮುಖದಮೇಲೆಲ್ಲಾ ಬೆವರು ಹನಿ ಮೂಡಿತ್ತು.



ಹಣ ಯಥೇಚ್ಛವಾಗಿ ಬಿದ್ದಿತ್ತು. 'ಸಧ್ಯ, ಆ ಓರಗಲ್ಲಿನಾತ ಬಂದು ಹೊತ್ತುಕೊಂಡು

ಹೋಗಲಿಲ್ಲ' ಎಂದುಕೊಂಡ. ಸಂಗಡ ತಂದಿದ್ದ ಚೀಲದಲ್ಲಿ ನಗನಾಣ್ಯಗಳನ್ನು ತುಂಬಲಾರಂಭಿಸಿದ. ಈ ಗಲಾಟೆಯಲ್ಲಿ ಕಮ್ಮಾರನು ಗಂಟೆಯ ವಿಚಾರ ಮರೆತಿದ್ದ. ಅದು ಅವನ ತಲೆಗೆತಾಕಿ 'ಠಣ್' ಎಂದು ಸದ್ದಾಯಿತು.

ಕಮ್ಮಾರನ ಹೃದಯಚಲನೆ ನಿಂತುಹೋಯಿತು. ಅಲ್ಲಿಯವರೆವಿಗೂ ಚೀಲದಲ್ಲಿ ತುಂಬಿಕೊಂಡಿದ್ದ ಧನದೊಂದಿಗೆ ಹೊರಬೀಳಬೇಕೆಂದು ಯೋಚಿಸಿದ. ಹಾಗೆಂದು ಹೊರಬರಲು ನಾಲ್ಕುಹೆಜ್ಜೆ ಮುಂದೆ ಇಡುವಷ್ಟರಲ್ಲಿ ಕತ್ತಿ ಹಿಡಿದು, ಗೋಡೆಗೆ ಒರಗಿಕೊಂಡು ತೂಕಡಿಸುತ್ತಿದ್ದ ಭಯಂಕರಾಕಾರನು ಕಣ್ಣುಜ್ಜಿಕೊಳ್ಳುತ್ತಾ "ಇದು ರಾತ್ರಿಯೋ, ಹಗಲೋ" ಎಂದು ಹೂಂಕರಿಸಿದ.

ಕಮ್ಮಾರ ತತ್ತರಗೊಂಡ. ಗಾಬರಿಯಲ್ಲಿ "ಇದು ರಾತ್ರಿ" ಎಂದು ಹೇಳಿದ. ಹಾಗೆಂದ ಕೂಡಲೇ ಆ ಭೀಕರಾಕೃತಿಯು ಮುಂದಕ್ಕೆ ನುಗ್ಗಿ ಕಮ್ಮಾರನನ್ನು ಅಟಕಾಯಿಸಿ, ಅವನ ಕೈಗಳನ್ನು ಗಟ್ಟಿಯಾಗಿ ಹಿಡಿದುಕೊಂಡ. ಕಮ್ಮಾರನು ಕೈಗಳನ್ನು ಬಿಡಿಸಿಕೊಳ್ಳಲು ಒದ್ದಾಡಿದರೂ ಆ ಭೀಕರಾಕೃತಿಯ ಹಿಡಿತ ಸಡಿಲವಾಗಲಿಲ್ಲ. ಮತ್ತೇನೂ ಮಾಡಲಾರದೆ ಕಮ್ಮಾರನು ಕೇಲುಗಣ್ಣು ಬಿಡುತ್ತಾ ಸುಮ್ಮನಿದ್ದ. ಆಗ ಆ ಭೀಕರಾಕಾರದ ವ್ಯಕ್ತಿಯು,

"ಅಕ್ರಂಖಾನ್ ದೋಚಿದ ಹಣವನ್ನು ನೀನು ದೋಚುತ್ತಿರುವೆಯಾ? ನಲವತ್ತು ವರ್ಷಗಳಿಂದ ನಾನಿದನ್ನು ಕಾವಲು ಕಾಯುತ್ತಿರುವೆನು. ನನ್ನ ತರುವಾಯ ಇದನ್ನು ಯಾರು ರಕ್ಷಿಸುವರೆಂದು ಯೋಚಿಸುತ್ತಿದ್ದೆ. ಶಹಭಾಸ್, ಒಳ್ಳೇ ಆಸಾಮಿ ಸಿಕ್ಕಿರುವೆ" ಎಂದು ಕಮ್ಮಾರನ ಕೈಗಳಿಗೆ ಬೇಡಿ ತೊಡಿಸಿ, ಗೋಡೆಗೆ ಜೋಡಿಸಿದ್ದ ಕಬ್ಬಿಣದ ಕಂಬಿಗೆ ಬಿಗಿದು ಕಟ್ಟಿದ.

ಅಂದಿನಿಂದ ಅಕ್ರಂಖಾನ್ ಖಜಾನೆಯನ್ನು ಕಾಯುವ ಕೆಲಸ ಕಮ್ಮಾರನದಾಯಿತು. 'ದುರಾಶೆಯಿಂದಲೇ ಅಲ್ಲವೇ ನನಗೆ ಈ ದುರ್ಗತಿ ಪ್ರಾಪ್ತವಾಯಿತು' ಎಂದುಕೊಂಡು ಬಹಳ ವ್ಯಥೆಪಟ್ಟ ಕಮ್ಮಾರ. ಸುತ್ತಲೂ ಮಿತಿಯಿಲ್ಲದಷ್ಟು ಹಣವಿದ್ದರೂ ಅನುಭವಿಸುವ ಯೋಗ್ಯತೆಯನ್ನು ಆತನು ಕಳೆದುಕೊಂಡನು.



# ರತ್ನಗೋಳ (ಹಿಂಬದಿಯ ಚಿತ್ರಕಥೆ-೫)

ಆ ಹಿರಿಯ ಬೆಸ್ತನು ಉತ್ಸಾಹದಿಂದ ಸಮುದ್ರದಲ್ಲಿ ಮುಳುಗಲು ಸಿದ್ಧನಾಗ ತೊಡಗಿದನು. ಅದಕ್ಕೆ ತಕ್ಕ ದುಸ್ತುಗಳನ್ನು ಧರಿಸಿಕೊಂಡನು. ದೋಣಿಯ ದಂಡೆಗೆ ಬಂದು ನಿಂತನು. ನಂತರ ಗಭಾಲೆಂದು ಸಮುದ್ರಕ್ಕೆ ಹಾರಿದನು. ಹಾರುತ್ತಲೇ ಸಮುದ್ರದ ನೀರು ತೆರೆಗಳನ್ನು ಏಳಿಸಿತು. ನೊರೆಗಳನ್ನು ಕಾರಿತು. ನೋಡುವವರಿಗೆ ಹೆದರಿಕೆಯಾಯಿತು. ಆದರೆ ಆ ಧೀರ ಬೆಸ್ತನು ಸ್ವಲ್ಪವೂ ಹೆದರಲಿಲ್ಲ. ನೆಟ್ಟಗೆ ಸಮುದ್ರತಳಕ್ಕೆ ಹೋಗಿ ಮುಟ್ಟಿದನು. ಅಲ್ಲಿ ಕಲ್ಲುಗಳು ತಗುಲಿದುವು.

ಮೊದಲು ಎತ್ತ ತಿರುಗಬೇಕೆಂದು ಅವನಿಗೆ ಗೊತ್ತಾಗಲಿಲ್ಲ. ತಡವರಿಸುತ್ತಾ ಹೋಗುತ್ತಿದ್ದಾಗ ಸ್ವಲ್ಪದೂರದಲ್ಲಿ ಮುದ್ದುಗುಲುಕುವ ಮುತ್ತಿನ ಕೋಟೆಯೊಂದು ಕಾಣಿಸಿತು. ಆ ಕೋಟೆಯ ಸುತ್ತಲೂ ರಮ್ಯವಾದ ಉದ್ಯಾನವನವು ರಂಗುರಂಗಾಗಿ ಕಾಣಿಸಿತು. ತಾನು ಹೋಗಬೇಕಾದ ಸ್ಥಳವು ಇದೇ ಎಂದು ಆ ಹಿರಿಯಬೆಸ್ತ ಗ್ರಹಿಸಿದ. ಅತ್ತಲೇ ನಡೆದ. ಹತ್ತಿರ ಹೋದಂತೆ ಚಂದ್ರನಕ್ಷತ್ರಗಳ ಕಾಂತಿಯನ್ನೂ ಮಿಂಚುವ ಬೆಳಕು ಸುತ್ತೂ ಪಸರಿಸಿಕೊಂಡಿತ್ತು. ಇಂತಹ ವಿಚಿತ್ರಕಾಂತಿ ಭೂಮಿಯಲ್ಲಿ ಎಲ್ಲಿಯೂ ಇಲ್ಲೆಂದು ಆತ ಬಲ್ಲ.

ಕಲ್ಲುಗಳನ್ನು ತಪ್ಪಿಸಿಕೊಳ್ಳುತ್ತಾ ಮೆಲ್ಲಗೆ ಹೋಗುತ್ತಿದ್ದ. ಅಲ್ಲಲ್ಲಿ ನೀರೊಳ್ಳೆಗಳೂ, ಫಳಫಳಿಸುವ ಮೀನುಗಳೂ ಅವನ ಕೈಕಾಲುಗಳನ್ನು ಕಡಿಯಲೂ, ಸುತ್ತಿಕೊಳ್ಳಲೂ ಬಂದುವು. ಎಲ್ಲವನ್ನೂ ಉಪಾಯವಾಗಿ ತಪ್ಪಿಸಿಕೊಂಡು ಸಾಗಿ, ಆ ಕಾಂತಿ ಬರುವ ಪ್ರದೇಶವನ್ನು ಮುಟ್ಟಿದ. ಅನೇಕ ಹೊಳೆಯುವ ಕಲ್ಲುಗಳನ್ನು ದಾಟಿಕೊಂಡು ಮುಂದೆ ಹೋದ. ಅಲ್ಲೊಂದು ಹಾಲುಗಲ್ಲಿನಮೇಲೆ ರತ್ನಗೋಳವನ್ನು ಬಲು ಸೊಗಸಾಗಿ ಮಡಗಲ್ಪಟ್ಟಿತ್ತು! ಅದರ ಕಾಂತಿ ಕಿರಣಗಳು ಸೂಜಿಗಳಂತೆ ಕಣ್ಣುಗಳನ್ನು ಚುಚ್ಚುತ್ತಿದ್ದುವು. ಫಕ್ಕನೆ ನೋಡಲಿಕ್ಕೂ ಸಾಧ್ಯವಾಗಲಿಲ್ಲ.

ಆದರೆ ಆ ರತ್ನಗೋಳವನ್ನು ಎತ್ತಿಕೊಳ್ಳೋಣವೆಂದರೆ, ಅದನ್ನಿಟ್ಟಿರುವ ಹಲಗೆಯ ಇಬ್ಬದಿಗಳಲ್ಲಿ ಎರಡು ಭೂತ ಸರ್ಪಗಳು ಸುತ್ತಿಕೊಂಡು ಕಾವಲು ಕಾಯುತ್ತಿವೆ. ವೃದ್ಧನು ಸಾಹಸಮಾಡಿ ಮುಂದಕ್ಕೆ ಹಾದು ಹೋದ. ಅವನ ಪುಣ್ಯ. ಆ ಭೂತಸರ್ಪಗಳೆರಡೂ ನಿದ್ರಿಸುತ್ತಿದ್ದುವು.

ಆ ವೀರವೃದ್ಧನು ಆ ಎರಡು ಭೂತ ಸರ್ಪಗಳ ನಡುವೇ ತೂರಿಕೊಂಡನು! ಹಲಗೆಯ ಮೇಲಿನಿಂದ ರತ್ನಗೋಳವನ್ನು ಕೈಗೆತ್ತಿಕೊಂಡನು!! ಇನ್ನೇನು, ಹಿಂತಿರುಗಿ ಹೋಗಲು ತಿರುಗಿ ನಿಂತನು !!!—



# ಭಯ ಅಂದರೆ?

ಒಂದು ಅಡವಿ. ಆ ಅಡವಿಯಲ್ಲಿ ಒಂದು ಕೊಳ. ಆ ಕೊಳದ ಸಮೀಪದಲ್ಲಿ ಒಂದು ಸಣ್ಣ ಗುಡಿಸಲು. ಆ ಗುಡಿಸಲಿನಲ್ಲಿ ಬಡವಳೊಬ್ಬಳು ವಾಸಮಾಡುತ್ತಿದ್ದಳು. ಆಕೆಗೆ ಸುಮಂತನೆಂಬ ಒಬ್ಬನೇ ಒಬ್ಬ ಮಗ.

ಒಂದುದಿನ ಸುಮಂತ, ಅವನ ತಾಯಿ ತಮ್ಮ ಗುಡಿಸಲಿನಲ್ಲಿ ಹಾಯಾಗಿ ನಿದ್ರೆಮಾಡುತ್ತಿದ್ದರು. ಅನಿರೀಕ್ಷಿತವಾಗಿ ಜೋರಾಗಿ ಗಾಳಿ ಬೀಸಲು ಪ್ರಾರಂಭವಾಯಿತು. ಮಿಂಚು ಮಿಂಚಿತು. ಗುಡುಗು ಸಿಡಿಲುಗಳು ತೊಡಗಿದುವು. ಜೋರಾಗಿ ಮಳೆಯೂ ಬಂದಿತು.

ಆ ಗಾಳಿಮಳೆಯ ಶಬ್ದ ಕೇಳಿ ತಾಯಿ ಎಚ್ಚೆತ್ತಳು. ಒಳಕ್ಕೆ ಗಾಳೀ ತುಂತುರು ಹನಿ ಬರುತ್ತಿದ್ದುವು. ಮಗನನ್ನು ಎಬ್ಬಿಸಿ "ಮಗೂ, ನನಗೆ ತುಂಬಾ ಭಯವಾಗಿದೆ. ಆ ಕಿಟಕಿ ಕೊಂಚ ಮುಚ್ಚಿಬಿಡು" ಎಂದು ಹೇಳಿದಳು.

ಸುಮಂತನು ನಿದ್ದೆಯಿಂದ ಎಚ್ಚೆತ್ತು, ತಾಯಿ ಹೇಳಿದ ಮಾತುಗಳನ್ನು ಕೇಳಿದ. ಅವನು 'ಭಯ' ಎಂಬ ಮಾತನ್ನು ಅದೇ ಮೊದಲನೆಯಸಾರಿ ಕೇಳಿದ್ದು! ಆದುದರಿಂದ "ಅಮ್ಮಾ ಕಿಟಕಿ ಮುಚ್ಚಿಬಿಡುತ್ತೇನೆ. ಆದರೆ 'ಭಯ' ಅಂದೆಯಲ್ಲಾ ಅದೇನದು? ಅದು ಹೇಗಿರುತ್ತದೆ?" ಎಂದು ಕೇಳಿದ.

ತಾಯಿ ಆ ಪ್ರಶ್ನೆಗೆ ಉತ್ತರ ಕೊಡಲಿಲ್ಲ. 'ಈ ಹಸುಳೆಗೇನು ಸಮಾಧಾನ ಕೊಡುವುದು' ಎಂದು ತಾತ್ಸಾರದಿಂದ ಮತ್ತೆ ಮುಸುಕು ಹಾಕಿಕೊಂಡು ಮಲಗಿದಳು.

ಆಗ ಸುಮಂತನಿಗೆ 'ಭಯ' ಎಂದರೆ ಹೇಗಿರುವುದೋ ತಿಳಿಯುವ ಕುತೂಹಲ ಉಂಟಾಯಿತು. ಯೋಚಿಸುತ್ತಾ ಕುಳಿತುಕೊಂಡರೆ ಪ್ರಯೋಜನವಿಲ್ಲವೆಂದು, ಮೆಲ್ಲನೆ ಬಾಗಿಲು ಚಿಲಕ ತೆಗೆದುಕೊಂಡು ಹೊರಗೆ ಬಂದ. ಆ ಕತ್ತಲೆಯಲ್ಲಿ, ಭಾರಿ ಮಳೆ ಗಾಳಿ

ಎಚ್. ಕಮಲಾಕುಮಾರಿ

ಯಲ್ಲಿ, ಕಾನನದಲ್ಲಿ "ಎಲೈ ಭಯವೇ ನೀನು ಎಲ್ಲಿರುವೆ? ಹೇಗಿರುವೆ?" ಎಂದು ಕೇಳುತ್ತಾ ಮುಂದೆ ನಡೆಯುತ್ತಿದ್ದ.

"ಮಗೂ, ಬಂದೆಯಾ, ತೊಟ್ಟಿಲು ಕೈಗೆ ಎಟುಕಿಸದು. ಯಾರಾದರೂ ಇತ್ತ ಬರುವರೇನೋ ಎಂದು ಬಹಳ ಹೊತ್ತಿನಿಂದ ಕಾದಿದ್ದೇನೆ. ನನ್ನನ್ನು ಸ್ವಲ್ಪ ನಿನ್ನ ಹೆಗಲಮೇಲೇರಿಸಿಕೊಂಡರೆ, ತೊಟ್ಟಿಲಲ್ಲಿ ತೂಕಡಿಸುತ್ತಿರುವ ಮಗುವನ್ನು ಕೆಳಗೆ ಇಳಿಸಿಕೊಳ್ಳುವೆನು" ಎಂಬ ಧ್ವನಿ ಕೇಳಿಸಿತು.

ಸುಮಂತನು ಧ್ವನಿ ಬಂದ ಕಡೆ ನುಗ್ಗಿದ. ಅಲ್ಲೊಂದು ಮನೆಯಲ್ಲಿ ಒಬ್ಬ ಸ್ತ್ರೀ ನಿಂತಿದ್ದಳು. ಮನೆಯ ತೊಲೆಗೆ ಒಂದು ತೊಟ್ಟಿಲು ಜೋತಾಡುತಿತ್ತು.

ಆಕೆ ನಿಜವಾಗಿ ಮಾನವ ಸ್ತ್ರೀಯಲ್ಲ; ಒಬ್ಬ ರಾಕ್ಷಸಿ. ಆ ವಿಷಯವರಿಯದ ಸುಮಂತನು ಆ ಮಾಯಾವಿನಿಯನ್ನು ತನ್ನ ಭುಜದಮೇಲೆ ಏರಿಸಿಕೊಂಡ. ರಾಕ್ಷಸಿ ಸುಮಂತನನ್ನು ತನ್ನ ಕಾಲುಗಳಿಂದ ಹೊಸೆಗಿ ಸಾಯಿಸಬೇಕೆಂದು ಹವಣಿಸಿದಳು. ಆಗ ಸುಮಂತನಿಗೆ ಕೋಪ ಬಂದು, ರಾಕ್ಷಸಿ ಕೆಳಗೆ ಬೀಳುವಂತೆ ಒಂದು ಸಾರಿ ಕೈಯಿಂದ ತಳ್ಳಿದ.

ಆ ಬ್ರಹ್ಮರಾಕ್ಷಸಿ ಕೆಳಗೆ ದುಡಮ್ಮನೆ ಬಿದ್ದುಬಿಟ್ಟಳು. ಬಿದ್ದ ರಭಸಕ್ಕೆ ಆಕೆಯ ಕೋರೆ ಹಲ್ಲುಗಳು ಮುರಿದುಹೋದವು. ಕುಯ್ಯೋ ಮೊರ್ರೊ ಎಂದುಕೊಂಡು ಅಲ್ಲಿಂದ ಪಲಾಯನ ಮಾಡಿದಳು ಆ ರಾಕ್ಷಸಿ.



ಸುಮಂತ ಆ ಮನೆಯಿಂದ ಹೊರಗೆಬಂದ. ಅಷ್ಟು ಹೊತ್ತಿಗಾಗಲೇ ಸೂರ್ಯೋದಯವಾಗಿತ್ತು. ಇನ್ನಷ್ಟುದೂರ ನಡೆದ. ಒಂದು ಕಡೆ ಬಂಡೆಗಳ ಮೇಲೆ ಕುಳಿತಿದ್ದ ಕೆಲವು ಕಳ್ಳರು ಕಂಡುಬಂದರು. ಅವರು ಸುಮಂತನನ್ನು ನೋಡಿ "ಯಾರೋ ನೀನು? ಇಲ್ಲಿ ಗುಬ್ಬಚ್ಚಿ ಸಹ ಹಾರಾಡಲು ಹೆದರುತ್ತದೆ; ರಾಜನ ಸೈನ್ಯ ಇತ್ತ ಕಡೆ ಬರಲು ಹಿಂದೆಗೆಯುವುದು. ನೀನೇನೂ ಭಯವಿಲ್ಲದೆ ಇತ್ತ ಕಡೆ ಬರುತ್ತಿರುವೆಯಲ್ಲಾ" ಎಂದು ಕೇಳಿದರು.

"ಭಯವೆಂದರೆ ಏನು? ಅದು ಹೇಗಿರುತ್ತದೆ. ಅದನ್ನು ನೋಡಬೇಕೆಂತಲೇ ನಾನು ಬರುತ್ತಿದ್ದೇನೆ" ಎಂದ ಸುಮಂತ. ಕಳ್ಳರು ಈ ಉತ್ತರ ಕೇಳಿ ನಕ್ಕುಬಿಟ್ಟರು. ಅವರು




ಕಾವಲಿ, ಸಟ್ಟುಗ, ಹಸಿಹಿಟ್ಟುಗಳನ್ನು ಸುಮಂತನಿಗೆ ಕೊಟ್ಟು "ಎಲವೋ, ಆ ಮರಗಳಿರುವ ಶ್ಮಶಾನಕ್ಕೆ ಹೋಗಿ, ಈ ಹಿಟ್ಟಿನಿಂದ ಒಂದು ರೊಟ್ಟಿ ತಯಾರಿಸಿಕೊಂಡು ಬಾ. ಭಯವೆಂದರೇನೋ ನಿನಗೆ ಆಗ ತಿಳಿಯುತ್ತದೆ" ಎಂದು ಹೇಳಿದರು.

ಅವರ ಮಾತುಗಳಿಗೆ ಒಪ್ಪಿಕೊಂಡು, ಸುಮಂತನು ಶ್ಮಶಾನಕ್ಕೆ ಹೋಗಿ ಒಲೆ ಹಚ್ಚಿ ಕಾವಲಿಯಮೇಲೆ ರೊಟ್ಟಿ ಸುಡುತ್ತಿದ್ದ. ಆ ಪಕ್ಕದಲ್ಲೇ ಇದ್ದ ಸಮಾಧಿಯಿಂದ ಒಂದು ಭಾರಿ ಕೈ ಹೊರಬಂದು, "ಹೈದಾ, ನನಗಷ್ಟು ರೊಟ್ಟಿಯ ರುಚಿ ತೋರಿಸುವುದಿಲ್ಲವೇ?" ಎಂದಿತು. ಕೆಲಸದ ನಡುವೆಯಿದ್ದ ಸುಮಂತನಿಗೆ ತುಂಬಾ ಕೋಪ ಬಂತು.

"ಓ ರೊಟ್ಟಿಯ ರುಚಿ ತೋರಿಸಬೇಕೋ? ಬದುಕಿರುವ ಜನರ ಹಸಿವು ತೀರಿಸುವಮುನ್ನ ನಿನ್ನ ಹಸಿವನ್ನು ತೀರಿಸುತ್ತೇನೆ, ಮೊದಲು" ಎಂದು ಗದರಿಸಿಕೊಳ್ಳುತ್ತಾ ಕೈಯಲ್ಲಿದ್ದ ಸಟ್ಟುಗದಿಂದ ಆ ಭಾರಿ ಕೈಗೆ ಒಂದು ಏಟು ಹಾಕಿದ. ಆ ಏಟಿಗೆ ಕೈ ಸಮಾಧಿಯಲ್ಲಿ ಮಾಯವಾಯಿತು.

ರೊಟ್ಟಿಯ ಸುಟ್ಟು ಸುಮಂತನು ಕಳ್ಳರ ಹತ್ತಿರ ಬಂದು ನಡೆದ ವಿಷಯವನ್ನೆಲ್ಲಾ ಹೇಳಿದ. ಕಳ್ಳರು ಸುಮಂತನ ಎದೆಗಾರಿಕೆಗೆ ತಲ್ಲಣಿಸಿದರು.

"ಅಣ್ಣಾ, ನಿನಗೆ ಭಯವನ್ನು ತೋರಿಸಲು ನಮ್ಮಿಂದ ಸಾಧ್ಯವಿಲ್ಲ. ಇಲ್ಲಿಂದ ಬೇಗ ಹೊರಟುಬಿಡು. ನಿನಗೆ ಪುಣ್ಯಬರುತ್ತದೆ. ನಮ್ಮನ್ನು ಹೀಗೇ ಬದುಕಿರಲುಬಿಡು" ಎಂದು ಗೋಗರೆದರು.

ಸುಮಂತನು ಅಲ್ಲಿಂದ ಮತ್ತಷ್ಟುದೂರ ಹೋಗಲು ಒಬ್ಬ ವೃದ್ಧಳು ಎದುರಾದಳು. "ಏಕೆಮಗೂ, ಹೀಗೆ ಅಡವಿಯಲ್ಲಿ ಓಡಾಡುತ್ತಿರುವೆ?" ಎಂದು ಕೇಳಿದಳು.

ಸುಮಂತನು ಎಲ್ಲಾ ವಿವರವಾಗಿ ಹೇಳಿ" ಅಜ್ಜೀ, ಭಯವೆಂದರೆ ಹೇಗಿರುವುದೋ ನೋಡಬೇಕೆಂದು ನನ್ನ ಅಭಿಲಾಷೆ. ಆ ಆಶೆ ಇನ್ನೂ ತೀರಲಿಲ್ಲ" ಎಂದ. ಅಜ್ಜಿ ನಗುತ್ತಾ,

"ನಿನ್ನಂತಹಳೇ ನನಗೊಬ್ಬ ಮೊಮ್ಮಗಳಿದ್ದಾಳೆ. ಬಾ, ಮಗೂ, ಪ್ರಾಯಶಃ ಅವಳು ನಿನ್ನ ಕೋರಿಕೆಯನ್ನು ನೆರವೇರಿಸಬಲ್ಲ

ಳೇನೋ" ಎಂದು ಸುಮಂತನನ್ನು ಆ ಮುದುಕಿ ಸಂಗಡ ಕರೆದುಕೊಂಡು ಹೋದಳು.

ಅಜ್ಜಿಯ ಮೊಮ್ಮಗಳು ತುಂಬಾ ಚೂಟಿ, ಯುಕ್ತಿವಂತಳು. ಸುಮಂತನ ಕಥೆಯನ್ನೆಲ್ಲಾ ಕೇಳಿ ಒಂದು ಪಿತೂರಿ ಹೂಡಿದಳು.

ಸುಮಂತನಿಗೆ ಅನ್ನಬಡಿಸಿ ತಾನಷ್ಟು ದೂರ ಹೋಗಿ ನಿಂತುಕೊಂಡಳು. ಸುಮಂತನು ಅನ್ನವನ್ನು ಕಲೆಸಿಕೊಂಡು ಇನ್ನೇನು ತುತ್ತನ್ನು ಬಾಯಿಯಲ್ಲಿಟ್ಟುಕೊಳ್ಳ ಬೇಕೆನ್ನುವಾಗ. "ಇರಿ, ತುಸ ಇರಿ. ವ್ಯಂಜನಗಳನ್ನು ಮಾಡಿದ ಪಾತ್ರತರಲು ಮರೆತೆ" ಎಂದು ಅಡಿಗೆ ಮನೆಗೆ ಹೋಗಿ ಒಂದು ದೊಡ್ಡ ಪಾತ್ರ ತಂದು ಆತನ ಮುಂದೆ ಇಟ್ಟಳು.

ಸುಮಂತನು ಪದಾರ್ಥವನ್ನು ಹಾಕಿಕೊಳ್ಳಲು ಆ ಪಾತ್ರದ ಮುಚ್ಚಳ ತೆಗೆದ. ಕೂಡಲೇ ಅದರಿಂದ ಟಪಟಪನೆಂದು ಶಬ್ದ ಬಂತು. 'ಹಾಂ' ಎಂದು ಸುಮಂತನು ಭಯಪಟ್ಟು ಹಿಂದಕ್ಕೆ ಸರಿದ. ಮುಚ್ಚಳವಿಟ್ಟಿದ್ದ ಪಾತ್ರದಿಂದ ಒಂದು ಗುಬ್ಬಚ್ಚಿ, ತುರ್ರನೆ ಹೊರಗೆ ಹಾರಿಹೋಯಿತು. ಸುಮಂತನು, ಆ ಗುಬ್ಬಚ್ಚಿ ಹಾರಿಹೋದಕಡೆಯೇ ನೋಡುತ್ತಾ ಸುಮ್ಮನೆ ಇದ್ದುಬಿಟ್ಟ.

ಅಜ್ಜಿಯ ಮೊಮ್ಮಗಳು ಗಹಗಹಿಸಿ ನಗುತ್ತಾ "ಈಗ ತಿಳಿಯಿತೇ ಭಯವೆಂದರೇನು, ಎಂತ?" ಎಂದು ಕೇಳಿದಳು.

ಸುಮಂತನು ಸತ್ಯವನ್ನು ಒಪ್ಪಿಕೊಳ್ಳಲೇ ಬೇಕಾಯಿತು. "ಹೌದು ಭಯವೆಂದರೇನೋ ನನಗೆ ಈಗ ತಿಳಿಯಿತು. ಇನ್ನು ನಮ್ಮ ತಾಯಿಯ ಹತ್ತಿರಕ್ಕೆ ಹೋಗುತ್ತೇನೆ. ನೀವಿಬ್ಬರೂ ನಮ್ಮ ಮನೆಗೆ ಬಂದರೆ ನಮ್ಮ ತಾಯಿ ಸಂತೋಷಿಸುವಳು" ಎಂದು ಎದ್ದ.

ಗಂಡು ದಿಕ್ಕಿಲ್ಲದ ಆ ಅಜ್ಜಿ, ಮತ್ತು ಆಕೆಯ ಮೊಮ್ಮಗಳು ಸುಮಂತನ ಕೋರಿಕೆಯ ಪ್ರಕಾರವೇ ಅವನ ಮನೆಗೆ ಹೋದರು. ಸುಮಂತನ ತಾಯಿಗೆ ಅಮಿತಾನಂದವುಂಟಾಯಿತು. ಎಲ್ಲರೂ ಒಂದೇ ಕುಟುಂಬದಂತೆ ಆ ಮನೆಯಲ್ಲಿ ವಾಸಿಸುತ್ತಿದ್ದರು. ಸುಮಂತನು ದೇಹದುಡಿಸಿ, ಕೆಲಸ ಮಾಡುತ್ತಿದ್ದ.

ಕೆಲ ದಿನಗಳ ನಂತರ ಸುಮಂತನಿಗೂ, ಅಜ್ಜಿಯ ಮೊಮ್ಮಗಳಿಗೂ ಮದುವೆ ಆಯಿತು.





# ವಾರ್ತೆಗಳು-ವಿಶೇಷಗಳು

ಟಾಸ್ಮೇನಿಯಾ ದೇಶದ ಅಡವಿಗಳಲ್ಲಿ ಭಯಂಕರವಾದ ಒಂದು ಜಾತಿಯ ತೋಳವಿದೆ. ಗಂಡು ತೋಳವು ನಾಯಿಯಂತೆ, ಹೆಣ್ಣು ಕಂಗಾರೂವಿನಂತೆಯೂ ಇದೆಯೆಂದು ಇದನ್ನು ಹಿಡಿಯುವ ಬ್ರಿಟಿಷ್ ಬೇಟೆಗಾರರು ಹೇಳುತ್ತಾರೆ. ಇದು ಒಮ್ಮೆಗೇ ಲೆಕ್ಕವಿಲ್ಲದಷ್ಟು ಆಡು ಕುರಿಗಳನ್ನು ಕದಿಯುತ್ತದಂತೆ. ಆದುದರಿಂದ ಇವುಗಳನ್ನು ದಟ್ಟಡವಿಯ ನಟ್ಟನಡುವಿಗೆ ಅಟ್ಟಿಬಿಟ್ಟರು; ಅಂತೆಯೇ ಈಗ ಅವು ಕಾಣುವುದಿಲ್ಲವಂತೆ. ಕಾಣದೆ ಈಗ ೨೦ ವರ್ಷಗಳಾದುದರಿಂದ ಅವುಗಳ ಜಾತಿಯೇ ನಾಶವಾಗಿರಬೇಕೆಂದು ಬೇಟೆಗಾರರ ಊಹೆ.

* * *

'ಜೆಕೊಸ್ಲೊವಾಕಿಯಾ' ವ್ಯಾಯಾಮವೀರ ಎಮಿಲ್ ಜಟೊಪೆಕ್ ಎಂಬವನು ೯ ಪ್ರಪಂಚ ರಿಕಾರ್ಡುಗಳನ್ನು ಸ್ಥಾಪಿಸಿದ್ದ. ಈಗ ೧೦,೦೦೦ ಮೀಟರ್‌ಗಳ ಓಟದಲ್ಲಿ ತನ್ನ ರಿಕಾರ್ಡನ್ನೇ ಅತಿಕ್ರಮಿಸಿಬಿಟ್ಟಿದ್ದಾನೆ. ಸುಮಾರು ೬ ಮೈಲು ದೂರವನ್ನು ಇವನು ೨೮ ನಿಮಿಷ ೫೪-೨ ಸೆಕೆಂಡುಗಳಲ್ಲಿ ಓಡಿದ್ದಾನೆ.

* * *

ಚೀಣಾ ಪ್ರಧಾನಿಗಳಾದ ಚೌ-ಎನ್-ಲಾಯ್ ನ್ಯೂಢಿಲ್ಲಿಗೆ ಬಂದಾಗ ಭಾರತ ಪ್ರಧಾನಿ ಪಂಡಿತ ನೆಹರೂ ಗಾಂಧೀಜಿಯ ಉಪನ್ಯಾಸಗಳ ರಿಕಾರ್ಡುಗಳನ್ನು ಅವರಿಗೆ ಬಹುಮಾನವಾಗಿ ಕೊಟ್ಟರು.

ಈಚೆಗೆ ಅಲಹಾಬಾದಿಗೆ ಭಾರತ ಮಂತ್ರಿ ಪಂಡಿತ ಜವಹರಲಾಲ ನೆಹರೂರವರು ಭೇಟಿ ಕೊಡುವ ಸಂದರ್ಭ ಬಂತು. ಅವರು ಬೀದಿಯಲ್ಲಿ ಬರುತ್ತಿದ್ದಾಗ ಅವರನ್ನು ಸ್ವಾಗತಿಸಲು ಮಹಾ ಜನಸಮೂಹವೇ ನೆರೆದಿತ್ತು. ಆ ಸಮೂಹದಲ್ಲಿ ಚಿಕ್ಕಮಕ್ಕಳೂ ನೆರೆದಿದ್ದರು. ಪಂಡಿತ ನೆಹರೂರವರು ಆ ಮಕ್ಕಳಿಗೆ ಹೂಮಾಲೆಗಳನ್ನು ಕೊಡುವುದಕ್ಕಾಗಿ ದಾರಿಯಲ್ಲಿ ಅನೇಕಸಾರಿ ತಮ್ಮ ಕಾರನ್ನು ನಿಲ್ಲಿಸಿದರು. ನೆಹರು ತಮ್ಮ ಕೈಯಿಂದ ಮಕ್ಕಳಿಗೆ ಪೂಮಾಲೆ ಹಾಕಿದಾಗ ಮಕ್ಕಳೆಲ್ಲಾ "ನೆಹರೂ ಕೀ ಜೈ!" ಎಂದು ಘೋಷಿಸಿದರು. ಅನಂತರ ಅಲ್ಲಿಯ ಬಾಲಗೃಹದಲ್ಲಿಕೂಡಾ ಪಂಡಿತ ನೆಹರೂ ಮಕ್ಕಳೊಡನೆ ಕೆಲವು ವೇಳೆಗಳನ್ನು ಕಳೆದರು.

* * *

ಹಿಮಾಲಯಪರ್ವತದ ಅತ್ಯುನ್ನತಪ್ರದೇಶವನ್ನು ಏರಲಿಕ್ಕೆ ಪ್ರತಿವರ್ಷವೂ ಅನೇಕ ದೇಶದವರು ಪ್ರಯತ್ನಿಸುತ್ತಾರೆ. ಎವರೆಸ್ಟ್ ಶಿಖರದ ವಿಜಯ ಸಾಧಿಸಿದ್ದಾಯಿತು. ಈ ವರ್ಷ ಗೌರೀಶಂಕರ ಶಿಖರವನ್ನೇರಲು ಒಂದು ಗುಂಪು ಹೊರಡಲಿದೆ. ಇದಕ್ಕೆ ನಾಯಕರು ರೇಮುಂಡ್ ಲಾಂಬರ್ಟ್ ಎಂಬವರು. ಎವರೆಸ್ಟ್ ವಿಜಯಿಯಾದ ಷೆರ್ಪಾ ತೇನಸಿಂಗರನ್ನು ಈ ಗೋಂಪಿನೊಂದಿಗೆ ಕರೆದೊಯ್ಯಲು ಪ್ರಯತ್ನವಾಗುತ್ತದೆ.

ಮಕಾಲೂ ಶಿಖರವನ್ನು ಏರಲು ಪ್ರಯತ್ನಿಸಿದ ಕೆಲ ಅಮೆರಿಕನ್ನರು ವಿಫಲರಾಗಿ ಹಿಂದಿಳಿದರು. ಗಾಡ್ವಿನ್ ಆಸ್ಟಿನ್ ಎಂಬ ಶಿಖರವನ್ನು ಏರಲಿಕ್ಕೆ ಇಟಲಿಯ ಪಂಗಡವೊಂದು ಯತ್ನಿಸುತ್ತಿದೆ. ಅವರು ಏರುವ ದಾರಿಯಲ್ಲಿದ್ದಾರೆ.

ಇದುವರೆಗೆ ಯಾರೂ ಕಂಡುಹಿಡಿಯದ ಹಿಮಾಲಯದ ಎರಡು ಹೊಸ ಶಿಖರಗಳು ಇತ್ತೀಚೆಗೆ ಕಂಡುಹಿಡಿಯಲ್ಪಟ್ಟಿತು. ಇದನ್ನು ಕಂಡುಹಿಡಿದವರು ಭಾರತೀಯರೇ.

* * *

ನಮ್ಮದೇಶದ ಶ್ರೀಮಂತ ದೇವರು ತಿರುಪತಿ ವೆಂಕಟೇಶ್ವರಸ್ವಾಮಿ. ಈ ದೇವರ ಆಭರಣಗಳ ಬೆಲೆ ರೂ. ೭೫,೬೬,೯೦೬—೨—೦ ಎಂದು ಲೆಕ್ಕಹಾಕಲಾಗಿದೆ. ಎರಡನೇ ಸ್ಥಾನ ಶ್ರೀರಂಗದ ದೇವರದು. ಅಲ್ಲಿಯ ದೇವರ ಆಭರಣಗಳ ಬೆಲೆ ರೂ ೩೮,೪೦,೬೩೮-೮-೬ ಮಾತ್ರ.

* * *

ನಾಲ್ಕೇ ನಿಮಿಷದಲ್ಲಿ ಒಂದು ಮೈಲು ಓಡಿದವರ ದಾಖಲೆ ಈವರೆಗೆ ಇರಲಿಲ್ಲ. ಇತ್ತೀಚೆಗೆ ಬಾನಿಸ್ಟರ್ ಎಂಬ ಬ್ರಿಟಿಷ್ ವಿದ್ಯಾರ್ಥಿ ೪ ನಿಮಿಷಕ್ಕೆ ಅರ್ಧ ಸೆಕೆಂಡ್ ಕಡಮೆ ಇರುವಾಗಲೇ ಒಂದು ಮೈಲು ಓಡಿಬಿಟ್ಟ. ಜೂನ್ ೨೧ ರಂದು ಜಾನ್ ಲಾಂಡಿ ಎಂಬ ಆಸ್ಟ್ರೇಲಿಯನ್ನನು ಮೂರು ನಿಮಿಷ ೫೮ ಸೆಕೆಂಡುಗಳಲ್ಲಿ ಒಂದು ಮೈಲು ಓಡಿದ್ದಾನೆ.

* * *

ಮಹಾತ್ಮಗಾಂಧಿಯ ಜೀವನ ಚರಿತ್ರೆಯನ್ನು ತೋರಿಸುವ "ಭಾರತದ ಧ್ವನಿ" ಎಂಬ ಚಲಚ್ಚಿತ್ರವನ್ನು ಇಡಿಯ ಭಾರತದೇಶದಲ್ಲೆಲ್ಲಾ ಪ್ರದರ್ಶಿಸುತ್ತಾರೆ. ಅದರಿಂದ ಬಂದ ಹಣವು ದೇಶದ ಅಭಿವೃದ್ಧಿ ಕಾರ್ಯಗಳಿಗೆ ವೆಚ್ಚವಾಗುತ್ತದಂತೆ.

ಪ್ರಪಂಚದ ಸ್ತ್ರೀಯರಲ್ಲಿ ಅತೀ ಕಡಮೆ ಕಾಲದಲ್ಲಿ ಒಂದು ಮೈಲು ಓಡಿದವಳು ಡಯಾನ್ ಲೀಥರ್ ಎಂಬ ಬ್ರಿಟಿಷ್ ಸ್ತ್ರೀ. ಇವಳು ಸರಿಯಾಗಿ ಐದು ನಿಮಿಷದಲ್ಲಿ ಒಂದು ಮೈಲು ದೂರವನ್ನು ಓಡಿದಳು.

* * *

ಜೂನ್ ೩೦ ರಲ್ಲಿ ಅನೇಕ ದೇಶಗಳಲ್ಲಿ ಸಂಪೂರ್ಣ ಸೂರ್ಯಗ್ರಹಣ ಕಂಡು ಬಂದಿತು. ಅಮೇರಿಕಾದಲ್ಲಿ ಈ ಗ್ರಹಣವನ್ನು ಟೆಲಿವಿಜನ್‌ದ್ವಾರಾ ಪ್ರಸಾರ ಮಾಡಿದರು. ಕೆಲವು ದೇಶಗಳಲ್ಲಿ ಪಾರ್ಶ್ವಗ್ರಹಣ ಮಾತ್ರವೇ ತೋರಿತು. ಚಂದ್ರಬಿಂಬವು ಸೂರ್ಯಗೋಳಕ್ಕೂ ಭೂಮಿಗೂ ನಡುವೆ ಅಡ್ಡವಾಗಿ ಹೋದಾಗ ಸೂರ್ಯಗ್ರಹಣವುಂಟಾಗುತ್ತದೆ. ಚಂದ್ರನ ನೆರಳು ಭೂಮಿಯ ಮೇಲೆ ಪೂರ್ಣವಾಗಿ ಬೀಳುವ ಪ್ರಾಂತಗಳಲ್ಲಿ ಸಂಪೂರ್ಣ ಸೂರ್ಯಗ್ರಹಣ ತೋರುತ್ತದೆ.

* * *

ಜೂನ್ ೩೦ ರಂದು ಹಿಡಿದ ಸೂರ್ಯಗ್ರಹಣದ ಕಾಲಕ್ಕೆ ಕುರುಕ್ಷೇತ್ರದಲ್ಲಿ ನಾಲ್ಕು ಲಕ್ಷ ಜನರು ಕೂಡಿದ್ದರು.

* * *

ಅಲಹಾಬಾದು ಮ್ಯೂಜಿಯಂಗೆ ಹಮಿಾದಾಲಿ ಎಂಬವರೂ ಅವರ ಪತ್ನಿಯೂ ಕೆಲವು ಅಪೂರ್ವ ವಸ್ತುಗಳನ್ನು ಕೊಟ್ಟರು. ಹಮಿಾದಾಲಿ ಕೊಟ್ಟ ವಸ್ತುಗಳಲ್ಲಿ ಅಕ್ಬರನ ಅಂತಃಪುರಕ್ಕೆ ಸೇರಿದ ಬೆಳ್ಳಿ ನಗಗಳ ಪೆಟ್ಟಿಗೆಯೊಂದಿತ್ತು. ಇದನ್ನು ಮ್ಯೂಜಿಯಂಗೆ ಕೊಟ್ಟ ಹಮಿಾದಾಲಿಯವರು ಅಬ್ಬಾಸ್ ತಯಾಬ್ಜಿ ಎಂಬ ಬೊಂಬಾಯಿಯ ಪ್ರಸಿದ್ಧ ಕಾಂಗ್ರೆಸು ನಾಯಕರ ಅಳಿಯ.

# ಚಿತ್ರ ಕಥೆ



ವಾಸು ಮತ್ತು ಗೋಪಿಯುವರ ಪಾಠಶಾಲೆಯ ವಾರ್ಷಿಕೋತ್ಸವ ಬಂತು. ಅವರಿಬ್ಬರೂ ಮೊಸಳೆ-ಕರಡಿಗಳ ವೇಷವನ್ನು ಹಾಕಿಕೊಂಡು ಹೋದರು. ವಿದ್ಯಾರ್ಥಿಗಳೊಡನೆ ಕೂಡಿ ಕುಣಿದರು. ಅದೇ ವೇಷದೊಂದಿಗೆ ಮನೆಗೆ ಹೊರಟರು. ದಾರಿಯಲ್ಲಿ ಇವರ ವೇಷವನ್ನು ನೋಡಿದ ಕೆಲವು ಹುಡುಗರು ಹೆದರಿ ಓಡಿದರು.




ಅವರಿಬ್ಬರೂ ಬಸ್‌ಸ್ಟಾಂಡಿನಲ್ಲಿ ನಿಂತರು. ಬಸ್ಸು ಬಂತು. ಇವರ ವೇಷ ನೋಡಿ ಕಂಡಕ್ಟರ್ ಬಸ್ ನಿಲ್ಲಿಸದೇ ಓಡಿಸಲಿಕ್ಕಿದ್ದ. ಅದನ್ನರಿತ ವಾಸೂ ಗೋಪಿಯೂ ತಮ್ಮ ಮುಖಗಳನ್ನು ತೋರಿಸಿದರು. ಬಸ್ಸು ನಿಂತಿತು. ಇಬ್ಬರೂ ಬಸ್ಸೇರಿ ಕುಳಿತರು. ಆಗ ಪ್ರಯಾಣಿಕರು ಇವರನ್ನು ನೋಡಿ—"ನೀವು ನಿಜರೂಪಕ್ಕಿಂತಲೂ, ಮೊಸಳೆ-ಕರಡಿಗಳ ರೂಪದಲ್ಲೇ ಚೆನ್ನಾಗಿರುವಿರಿ!" ಎಂದು ನಕ್ಕರು.

Printed by B. NAGI REDDI at the B. N. K. Press Ltd., Madras 26, and Published by him for Chandamama Publications. Madras 26. Controlling Editor: SRI 'CHAKRAPANI'

Photo by R. M. Agashe



ಬಹುಮಾನ ಪಡೆದ ಶೀರ್ಷಿಕೆ

ಇದ್ದು ಹೀ-ವೇಷ !!

ಕಳಿಸಿದವರು:
ಬಿ. ರಾಧಾಕೃಷ್ಣರಾವ್

